# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 790 |
| ಸದಸ್ಯರ ಹೆಸರು | : | ಶ್ರೀ ಮಂಜುನಾಥ್ ಎ. |
| ಉತ್ತರಿಸುವ ದಿನಾಂಕ | : | 10.12.2020. |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಇಲಾಖೆ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2018-19 ಹಾಗೂ 2019-20ನೇ ಸಾಲಿನಲ್ಲಿ ಮಾಗಡಿ ವಿಧಾನಸಭಾ ಕ್ಷೇತ್ರಕ್ಕೆ ಡಾ.ಬಿ.ಆರ್.ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ ಗಂಗಾ ಕಲ್ಯಾಣ ಯೋಜನೆಯಡಿ ಮಂಜೂರಾಗಿರುವ ಕೊಳವೆ ಬಾವಿಗಳನ್ನು ಕೊರೆಯದೇ ಇರುವುದಕ್ಕೆ ಕಾರಣಗಳೇನು? | 2018-19ನೇ ಸಾಲಿನಲ್ಲಿ ಮಾಗಡಿ ವಿಧಾನಸಭಾ ಕ್ಷೇತ್ರದಲ್ಲಿ ಕೊಳವೆ ಬಾವಿ ಕೊರೆಯಲು ಕಾರ್ಯಾದೇಶ ನೀಡಲಾಗಿದೆ. ಆದರೆ ಗುತ್ತಿಗೆದಾರರು ಕೊಳವೆ ಬಾವಿಗಳನ್ನು ಕೊರೆಯಲು ವಿಳಂಬ ಮಾಡುತ್ತಿದ್ದು, ಈ ಬಗ್ಗೆ ಈಗಾಗಲೇ ಗುತ್ತಿಗೆದಾರರಿಗೆ ಕಾರಣ ಕೇಳುವ ನೋಟೀಸ್ ಅನ್ನು ಜಾರಿ ಮಾಡಲಾಗಿದೆ. ಶೀಘ್ರದಲ್ಲಿ ಕೊಳವೆ ಬಾವಿಗಳನ್ನು ಕೊರೆಯಲು ಕ್ರಮವಹಿಸಲಾಗುವುದು.<br>2019-20ನೇ ಸಾಲಿನ ಕೊಳವೆ ಬಾವಿಗಳನ್ನು ಕೊರೆಯಲು ಟೆಂಡರ್ ಆಹ್ವಾನಿಸಲು ಕ್ರಮವಹಿಸಲಾಗುತ್ತಿದೆ. |
| ಆ) | ಈ ಯೋಜನೆಯಡಿ ಮಂಜೂರಾಗಿರುವ ಕೊಳವೆ ಬಾವಿಗಳನ್ನು ಕೊರೆಯಲು ಯಾವ ಖಾಸಗಿ ಸಂಸ್ಥೆಗಳಿಗೆ ವಹಿಸಲಾಗಿದೆ. | 2018-19ನೇ ಸಾಲಿನಲ್ಲಿ ಮಾಗಡಿ ವಿಧಾನಸಭಾ ಕ್ಷೇತ್ರದಲ್ಲಿ ಕೊಳವೆ ಬಾವಿಗಳನ್ನು ಕೊರೆಯಲು ಮೆ: ಜಿಯೋ ಕನ್ಸಲ್ಟೆನ್ಸಿ ಸರ್ವೀಸಸ್, ಬೆಂಗಳೂರು ಇವರಿಗೆ ಟೆಂಡರ್ ಮೂಲಕ ವಹಿಸಲಾಗಿದೆ. |
| ಇ) | ಕೊಳವೆ ಬಾವಿಗಳನ್ನು ಕೊರೆಯದೇ ಇರುವುದರಿಂದ ಅರ್ಹ ಫಲಾನುಭವಿಗಳು ನೀರಾವರಿ ಸೌಲಭ್ಯಗಳಿಂದ ವಂಚಿತರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಬಂದಿದೆ. |
| ಈ) | ಹಾಗಿದ್ದಲ್ಲಿ, ಮೇಲ್ಕಂಡ ಅವಧಿಯಲ್ಲಿ ಮಂಜೂರಾಗಿರುವ ಕೊಳವೆ ಬಾವಿಗಳನ್ನು ಎಷ್ಟು ಅವಧಿಯೊಳಗೆ ಕೊರೆದು ವಿದ್ಯುದ್ದೀಕರಣದೊಂದಿಗೆ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು? (ಸಂಪೂರ್ಣ ಮಾಹಿತಿ ನೀಡುವುದು) | 2018-19ನೇ ಸಾಲಿನಲ್ಲಿ ಮಾಗಡಿ ವಿಧಾನಸಭಾ ಕ್ಷೇತ್ರಕ್ಕೆ ಮಂಜೂರಾದ ಕೊಳವೆ ಬಾವಿಗಳನ್ನು ಕೊರೆಯಲು ಶೀಘ್ರದಲ್ಲಿ ಕ್ರಮವಹಿಸಿ ವಿದ್ಯುದ್ದೀಕರಣ ಇತ್ಯಾದಿ ಕಾಮಗಾರಿಗಳನ್ನು ಕೈಗೊಂಡು 3 ತಿಂಗಳ ಒಳಗೆ ಪೂರ್ಣಗೊಳಿಸಲಾಗುವುದು.<br>2019-20ನೇ ಸಾಲಿನ ಕೊಳವೆ ಬಾವಿಗಳನ್ನು ಕೊರೆಯಲು ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡ ನಂತರ ಟೆಂಡರ್‌ನಲ್ಲಿ ಆಯ್ಕೆಯಾದ L-1 ಗುತ್ತಿಗೆದಾರರಿಗೆ ಕಾರ್ಯಾದೇಶ ನೀಡಿ ತ್ವರಿತವಾಗಿ ಕೊಳವೆ ಬಾವಿಗಳನ್ನು ಕೊರೆಯಿಸಲು ಕ್ರಮ ಜರುಗಿಸಲಾಗುವುದು. |

ಸಂಖ್ಯೆ: ಸಕಇ 580 ಎಸ್‌ಡಿಸಿ 2020

(ಬಿ.ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 745 |
| ಮಾನ್ಯ ಸದಸ್ಯರ ಹೆಸರು | ಶ್ರೀ ಬೆಳ್ಳಿಪ್ರಕಾಶ್ (ಕಡೂರು) |
| ಉತ್ತರಿಸಬೇಕಾದ ದಿನಾಂಕ | 10-12-2020 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕಡೂರು ಕ್ಷೇತ್ರದ ವ್ಯಾಪ್ತಿಯಲ್ಲಿರುವ ಸರ್ಕಾರಿ ಆಸ್ಪತ್ರೆಗಳಲ್ಲಿ ವೈದ್ಯಕೀಯ ಸಿಬ್ಬಂದಿಗಳ ಕೊರತೆಯಿಂದಾಗಿ ಸಾರ್ವಜನಿಕರು ಚಿಕಿತ್ಸೆ ಪಡೆಯಲು ತೊಂದರೆ ಅನುಭವಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ | ಬಂದಿದ್ದಲ್ಲಿ, ಇದುವರೆವಿಗೂ ಸಿಬ್ಬಂದಿ ಒದಗಿಸದಿರಲು ಕಾರಣಗಳೇನು; (ವಿವರ ನೀಡುವುದು) | ರಾಜ್ಯದಲ್ಲಿ ಖಾಲಿ ಇರುವ 824 ತಜ್ಞ ವೈದ್ಯಾಧಿಕಾರಿಗಳು, 1246 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಮತ್ತು 88 ದಂತ ಆರೋಗ್ಯಾಧಿಕಾರಿ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅರ್ಜಿಗಳನ್ನು ಆಹ್ವಾನಿಸಿದ್ದು, ನೇಮಕಾತಿ ಪ್ರಕ್ರಿಯೆ ಚಾಲನೆಯಲ್ಲಿರುತ್ತದೆ. ಮುಂದುವರೆದು, ಇಲಾಖೆಯಲ್ಲಿ ಖಾಲಿ ಇರುವ ಅರೆ ವೈದ್ಯಕೀಯ ಸಿಬ್ಬಂದಿಯನ್ನು ಸಹ ವಿಶೇಷ ನೇಮಕಾತಿ ನಿಯಮಗಳ ಮೂಲಕ ಭರ್ತಿ ಮಾಡಿಕೊಳ್ಳಲು ಕ್ರಮವಹಿಸಲಾಗುತ್ತಿದೆ. |
| ಇ | ಕಡೂರು ಕ್ಷೇತ್ರದಲ್ಲಿ ಅತಿ ಹೆಚ್ಚು ಗ್ರಾಮಗಳಿದ್ದು, ತಾಯಿ ಮತ್ತು ಮಕ್ಕಳ ಆಸ್ಪತ್ರೆ ಅತ್ಯವಶ್ಯಕವಿರುವುದರಿಂದ, ಸದರಿ ಆಸ್ಪತ್ರೆಯನ್ನು ಸ್ಥಾಪಿಸುವ ಪ್ರಸ್ತಾವನೆಯ ಸರ್ಕಾರದ ಮುಂದಿದೆಯೇ; | ಇಲ್ಲ.<br>ಕಡೂರು ಕ್ಷೇತ್ರದ ಕಡೂರು ಪಟ್ಟಣದಲ್ಲಿ ಈಗಾಗಲೇ 100 ಹಾಸಿಗೆಯ ಸಾರ್ವಜನಿಕ ಆಸ್ಪತ್ರೆಯು ಕಾರ್ಯ ನಿರ್ವಹಿಸುತ್ತಿದ್ದು, ಹಲವಾರು ಆರೋಗ್ಯ ಸೇವೆಗಳನ್ನು ಸಾರ್ವಜನಿಕರಿಗೆ ನೀಡುತ್ತಿದ್ದು, ಈ ಸೇವೆಗಳಲ್ಲಿ ತಾಯಿ ಮತ್ತು ಮಕ್ಕಳ ಆರೈಕೆಯ ಆರೋಗ್ಯ ಸೇವೆಗಳೂ ಒಳಗೊಂಡಿದ್ದು, 20 ಹಾಸಿಗೆಗಳನ್ನು ತಾಯಿ ಮತ್ತು ಮಕ್ಕಳ ವಿಭಾಗಕ್ಕೆ ಮೀಸಲಿಡಲಾಗಿದೆ.<br>ಕಡೂರು ಸಾರ್ವಜನಿಕ ಆಸ್ಪತ್ರೆಗಳಲ್ಲಿ ಮಾಹೆಯಾನ 74 ಹೆರಿಗೆ ಪ್ರಕರಣಗಳು ಜರುಗುತ್ತಿವೆ. ಭಾರತ ಸರ್ಕಾರದ ಮಾನದಂಡಗಳ ಅನ್ವಯ Bed Occupancy Rate (BOR) ಪ್ರತ್ಯೇಕವಾದ ತಾಯಿ ಮತ್ತು ಮಕ್ಕಳ ಆಸ್ಪತ್ರೆಯನ್ನು ತೆರೆಯಲು BOR ಶೇ.70ಕ್ಕಿಂತ ಹೆಚ್ಚು ಇರಬೇಕು. ಪ್ರಸ್ತುತ ಜರುಗುತ್ತಿರುವ ಹೆರಿಗೆ ಪ್ರಕರಣಗಳು 150ಕ್ಕಿಂತ ಹೆಚ್ಚು ಆದಲ್ಲಿ ವಿಶೇಷವಾದ ತಾಯಿ ಮತ್ತು ಮಕ್ಕಳ ಆಸ್ಪತ್ರೆಯ ಸ್ಥಾಪನೆಗೆ |

| | | |
|---|---|---|
| | | ಅವಕಾಶವಿರುತ್ತದೆ. ಈ ಹಿನ್ನೆಲೆಯಲ್ಲಿ ಕಡೂರು ಕ್ಷೇತ್ರದಲ್ಲಿ ತಾಯಿ ಮತ್ತು ಮಕ್ಕಳ ಆಸ್ಪತ್ರೆಯನ್ನು ಸ್ಥಾಪಿಸಲು ಅವಕಾಶವಿರುವುದಿಲ್ಲ. |
| ಈ | ಈ ಕ್ಷೇತ್ರದಲ್ಲಿರುವ ಸರ್ಕಾರಿ ಆಸ್ಪತ್ರೆಗಳ ಅಭಿವೃದ್ಧಿಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | 2018-19 ಮತ್ತು 2019-20ನೇ ಸಾಲಿನಲ್ಲಿ ಕಡೂರು ತಾಲ್ಲೂಕಿನಲ್ಲಿ ಒಟ್ಟು 5 ದುರಸ್ತಿ ಮತ್ತು ನವೀಕರಣ ಕಾಮಗಾರಿಗಳನ್ನು ಒಟ್ಟು ರೂ.29.78 ಲಕ್ಷಗಳ ವೆಚ್ಚದಲ್ಲಿ ಕೈಗೊಂಡಿದ್ದು, ಸದರಿ ಕಾಮಗಾರಿಗಳು ಪೂರ್ಣಗೊಂಡಿರುತ್ತವೆ. ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |

ಸಂಖ್ಯೆ: ಆಕುಕ 357 ಹೆಚ್‌ಎಸ್‌ಎಂ 2020

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

2

<u>ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 745ಕ್ಕೆ ಅನುಬಂಧ</u>

2018-19- & 2019-20ನೇ ಸಾಲಿನಲ್ಲಿ ಕಡೂರು ಕ್ಷೇತ್ರ ವ್ಯಾಪ್ತಿಯಲ್ಲಿರುವ ಸರ್ಕಾರಿ ಆಸ್ಪತ್ರೆಗಳ ಅಭಿವೃದ್ಧಿಗೆ ಅನುಷ್ಠಾನಗೊಳಿಸಿರುವ ಕಾಮಗಾರಿಗಳ ವಿವರಗಳು:

| ಕ್ರಮ ಸಂಖ್ಯೆ | ಕಾಮಗಾರಿಯ ಹೆಸರು | ಅಂದಾಜು ಮೊತ್ತ (ರೂ ಲಕ್ಷಗಳಲ್ಲಿ) | ಷರಾ |
|---|---|---|---|
| 1 | Essential repairs & Renovation works to Toilets, Water supply & Sanitary works at **Biruru Community Health Center in Kaduru Taluk,** Chickmagalur District. | 4.98 | ಕಾಮಗಾರಿ ಪೂರ್ಣಗೊಂಡಿರುತ್ತದೆ. |
| 2 | Essential repairs & Renovation works to Toilets, Water supply & Sanitary works at **Kaduru Taluk Level Hospital in Chickmagalur** District. | 4.80 | ಕಾಮಗಾರಿ ಪೂರ್ಣಗೊಂಡಿರುತ್ತದೆ. |
| 3 | Providing Galvolume sheet & Repair to Roof works at **KaduruTaluk Level Hospital in Kaduru** Taluk, Chickmagalur District. | 10.00 | ಕಾಮಗಾರಿ ಪೂರ್ಣಗೊಂಡಿರುತ್ತದೆ |
| 4 | Essential repairs & Renovation works to Roof & Electrical Repair Works at **Biruru Community Health Center in Kadur Taluk,** Chickmagalur District. | 5.00 | ಕಾಮಗಾರಿ ಪೂರ್ಣಗೊಂಡಿರುತ್ತದೆ |
| 5 | Essential Repairs & Improvement works to Community Health Center at **Biruru in Kadur Taluk, Chikmagalur** District. | 5.00 | ಕಾಮಗಾರಿ ಪೂರ್ಣಗೊಂಡಿರುತ್ತದೆ |
| | **Total** | 29.78 | |

3



**ಕರ್ನಾಟಕ ವಿಧಾನ ಸಭೆ**

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 902
ಸದಸ್ಯರ ಹೆಸರು : ಶ್ರೀ ಮಹೇಶ್.ಎನ್
ಉತ್ತರಿಸಬೇಕಾದ ದಿನಾಂಕ : 10.12.2020
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಳ್ಳೇಗಾಲ ನಗರದಲ್ಲಿ ಸಂಸದರು ಮತ್ತು ಶಾಸಕರು ಸ್ಥಳೀಯ ಪ್ರದೇಶಾಭಿವೃದ್ಧಿ ಅನುದಾನದಡಿ ಮಹರ್ಷಿ ವಾಲ್ಮೀಕಿ ಭವನದ ಕಾಮಗಾರಿಯು 20 ವರ್ಷಗಳ ಹಿಂದೆಯೇ ಪ್ರಾರಂಭವಾಗಿ ಇನ್ನೂ ಅನುಷ್ಠಾನ ಹಂತದಲ್ಲಿಯೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೊಳ್ಳೇಗಾಲ ನಗರದಲ್ಲಿ ಸಂಸದರು ಮತ್ತು ಶಾಸಕರು ಸ್ಥಳೀಯ ಪ್ರದೇಶಾಭಿವೃದ್ಧಿ ಅನುದಾನದಡಿ ರೂ.20.00 ಲಕ್ಷಗಳನ್ನು ಚಾಮರಾಜನಗರ ಜಿಲ್ಲಾಧಿಕಾರಿಗಳ ಹಂತದಲ್ಲಿ ನೀಡಿರುತ್ತಾರೆ. ಸದರಿ ಕಾಮಗಾರಿಯನ್ನು ನಿರ್ಮಿತಿ ಕೇಂದ್ರ, ಚಾಮರಾಜನಗರ ಇವರು ನಿರ್ಮಿಸುತ್ತಿದ್ದಾರೆ. ಸಮಾಜ ಕಲ್ಯಾಣ ಇಲಾಖೆಯಲ್ಲಿ ಯಾವುದೇ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. |
| ಆ) | ವಾಲ್ಮೀಕಿ ಭವನದ ಕಾಮಗಾರಿಗೆ ಇಲ್ಲಿಯವರೆಗೆ ಒಟ್ಟು 37 ಲಕ್ಷ ಖರ್ಚಾಗಿದ್ದು, ಸದರಿ ಭವನವು ಸುಸಜ್ಜಿತವಾಗಿ ರೂಪುಗೊಳ್ಳಲು ಇನ್ನೂ ಹೆಚ್ಚಿನ ಅನುದಾನ ಅಗತ್ಯವಿರುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಬಂದಿದೆಯೇ; | ಪ್ರಸ್ತುತ ಈ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಬಂದಿರುವುದಿಲ್ಲ. ಪ್ರಸ್ತಾವನೆ ಬಂದಲ್ಲಿ, ಅದನ್ನು ಪರಿಶೀಲಿಸಿ ನಿಯಮಾನುಸಾರ ಸೂಕ್ತ ಕ್ರಮ ಜರುಗಿಸಲಾಗುವುದು.<br><br>1. ಖಾಸಗಿ ಸಂಘ-ಸಂಸ್ಥೆಗಳಿಗೆ ಶಾಲೆ/ಕಟ್ಟಡ/ಹಾಸ್ಟೆಲ್ ಕಟ್ಟಡ ಮತ್ತು ಸಮುದಾಯ ಭವನಗಳಿಗೆ ಅನುದಾನವನ್ನು ಗರಿಷ್ಠ ರೂ.50.00 ಲಕ್ಷಗಳನ್ನು ನೀಡಲಾಗುತ್ತಿದೆ.<br>2. ಸರ್ಕಾರದಿಂದ ಸಮುದಾಯ ಭವನಗಳನ್ನು ನಿರ್ಮಿಸುವಲ್ಲಿ ಈ ಕೆಳಗಿನಂತೆ ಅನುದಾನ ಮಿತಿಗಳನ್ನು ನಿರ್ಧರಿಸಲಾಗಿದೆ.<br><br>ಕ್ರ. ಸಂ / ಸ್ಥಳ / ಗರಿಷ್ಠ ಸಹಾಯಧನ (ರೂ. ಲಕ್ಷಗಳಲ್ಲಿ)<br>1. / ಪಟ್ಟಣ/ಗ್ರಾಮ ಪಂಚಾಯಿತಿ / 20.00<br>2 / ಹೋಬಳಿ ಮಟ್ಟದಲ್ಲಿ / 75.00<br>3 / ತಾಲ್ಲೂಕು ಕೇಂದ್ರ ಸ್ಥಾನ / 200.00<br>4 / ಜಿಲ್ಲಾ ಕೇಂದ್ರ ಸ್ಥಾನ / 400.00 |
| ಇ) | ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರದಿಂದ ಯಾವ ಕ್ರಮ ಕೈಗೊಳ್ಳಲಾಗಿದೆ; | |
| ಈ) | ಸದರಿ ಕಾಮಗಾರಿಯನ್ನು ಪೂರ್ಣಗೊಳಿಸಿ ಜನರ ಸೇವೆಗೆ ಅರ್ಪಿಸಲು ಇನ್ನೂ 02ಕೋಟಿ ರೂಪಾಯಿಗಳು ಅಗತ್ಯವಿದ್ದು ಈ ಮೊತ್ತದ ಬಿಡುಗಡೆಗೆ ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ; | |
| ಉ) | ಮಹರ್ಷಿ ವಾಲ್ಮೀಕಿ ಭವನವು ಪ್ರಸ್ತುತ ವರ್ಷವೇ ಜನರ ಸೇವೆಗೆ ಸಿಗುವಂತಾಗಲು ಉಳಿಕೆ 02 ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದೇ? | |

ಸಕಇ 368 ಎಸ್‌ಟಿಪಿ 2020

(ಬಿ.ಶ್ರೀರಾಮುಲು)
ಸಮಾಜಕಲ್ಯಾಣ ಸಚಿವರು

4

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 752 |
| ಸದಸ್ಯರ ಹೆಸರು | ಶ್ರೀ ಶರತ್ ಕುಮಾರ್ ಬಚ್ಚೇಗೌಡ (ಹೊಸಕೋಟೆ) |
| ಉತ್ತರಿಸಬೇಕಾದ ದಿನಾಂಕ | 10.12.2020 |
| ಉತ್ತರಿಸುವ ಸಚಿವರು | ವಿದ್ಯುನ್ಮಾನ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು |
| ಪ್ರಶ್ನೆ | ಉತ್ತರ |
| ಅ) ಇತ್ತೀಚೆಗೆ ನಡೆದ ಬೆಂಗಳೂರು ಟೆಕ್ ಸಮ್ಮಿಟ್‌ನಲ್ಲಿ ಎಷ್ಟು ಕಂಪನಿಗಳು ಭಾಗವಹಿಸಿದ್ದವು; | ಇತ್ತೀಚೆಗೆ ವರ್ಚುವಲ್ ರೂಪದಲ್ಲಿ ನಡೆದ ಬೆಂಗಳೂರು ಟೆಕ್ ಸಮ್ಮಿಟ್‌ನಲ್ಲಿ ಸುಮಾರು 3099 ಸಂಸ್ಥೆಗಳು/ ಕಂಪನಿಗಳು ಭಾಗವಹಿಸಿದ್ದವು. |
| ಆ) ರಾಜ್ಯದಲ್ಲಿ ಬಂಡವಾಳ ಹೂಡಿಕೆಯ ಸಂಬಂಧ ಎಷ್ಟು ಒಪ್ಪಂದಗಳಾಗಿವೆ; ಬಂಡವಾಳ ಹೂಡಿಕೆಯ ಪ್ರಮಾಣ ಎಷ್ಟು; | ಬೆಂಗಳೂರು ಟೆಕ್ ಸಮ್ಮಿಟ್-2020 ತಾಂತ್ರಿಕ ಸಮಾವೇಶವು "Next is Now" ಎಂಬ ಧ್ಯೇಯೋದ್ದೇಶದೊಂದಿಗೆ ಆರಂಭವಾಗಿದ್ದು, ಮುಂಬರುವ ದಿನಗಳಲ್ಲಿ ಜಾಗತಿಕ ಮಟ್ಟದಲ್ಲಿ ತಾಂತ್ರಿಕತೆಯಲ್ಲಿ ಆವಿಷ್ಕಾರ, ನಾವೀನ್ಯತೆಯನ್ನು ರಚಿಸಲು ಅತ್ಯಾಧುನಿಕ ತಂತ್ರಜ್ಞಾನ ಹಾಗೂ ಪೂರಕ ವಾತಾವರಣ ನಿರ್ಮಿಸುವುದಕ್ಕೆ ಸಂಬಂಧಿಸಿದಂತೆ ಸಮಾವೇಶಗೊಂಡಿದ್ದು, ಈ ಸಮಾವೇಶದಲ್ಲಿ ಜಾಗತಿಕ ಮಟ್ಟದಲ್ಲಿ ಉದ್ಯಮ ವಲಯದವರೂ ಸೇರಿದಂತೆ ಹಲವಾರು ಶೈಕ್ಷಣಿಕ ಸಂಸ್ಥೆಗಳು ಪಾಲ್ಗೊಂಡಿದ್ದು, ಇದು ಮುಂದಿನ ನಾಲ್ಕೈದು ವರ್ಷಗಳಲ್ಲಿ ತಾಂತ್ರಿಕತೆಯನ್ನು ಅಭಿವೃದ್ಧಿಪಡಿಸುವ ಸಲುವಾಗಿ ಆಯೋಜಿಸಲಾಗಿದ್ದು, ರಾಜ್ಯದಲ್ಲಿ ಬಂಡವಾಳ ಹೂಡಿಕೆ ಸಂಬಂಧವಾಗಿ ಆಯೋಜಿಸಿದ ಸಮಾವೇಶವಾಗಿರುವುದಿಲ್ಲ. ಆದ್ದರಿಂದ ಈ ಸಮಾವೇಶದಲ್ಲಿ ರಾಜ್ಯದಲ್ಲಿ ಬಂಡವಾಳ ಹೂಡಿಕೆಗೆ ಸಂಬಂಧಿಸಿದಂತೆ ಯಾವುದೇ ಒಪ್ಪಂದಗಳಾಗಿರುವುದಿಲ್ಲ.<br>ಆದಾಗ್ಯೂ ಸದರಿ ವರ್ಚುವಲ್ ಮೇಳದಲ್ಲಿ |

| | |
|---|---|
| | ನವೋದ್ಯಮಗಳ ಸ್ಥಾಪನೆ, ಕೌಶಲ್ಯ ಅಭಿವೃದ್ಧಿ ಸಂಶೋಧನೆ ಮತ್ತು ಅಭಿವೃದ್ಧಿ, ಇಕೋ ಸಿಸ್ಟಂ ಕನೆಕ್ಟ್, ಲೈಫ್ ಸೈನ್ಸ್, ಜೈವಿಕ ತಂತ್ರಜ್ಞಾನ, ಆರೋಗ್ಯ, ರಕ್ಷಣೆ, ಬಾಹ್ಯಾಕಾಶ, ಕ್ರೀಡೆ, ಶಿಕ್ಷಣ, ಪರಸ್ಪರ ಮಾರುಕಟ್ಟೆ ವಿಸ್ತರಣೆ ಸೇರಿದಂತೆ ಹಲವು ಕ್ಷೇತ್ರಗಳಲ್ಲಿ ಸಂಶೋಧನೆ ಅಭಿವೃದ್ಧಿ, ವಿಚಾರ ವಿನಿಮಯ, ಚರ್ಚೆ, ಸಂವಾದ, ಕೌಶಲ್ಯ ಅಭಿವೃದ್ಧಿ, ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದಂತೆ ಜಾಗತಿಕ ಆವಿಷ್ಕಾರ ಮೈತ್ರಿ ಕೂಟ (ಜಿಐಎ) ದೇಶಗಳ ಜೊತೆ ಮಹತ್ವದ 8 ಒಪ್ಪಂದಗಳಿಗೆ ಒಡಂಬಡಿಕೆ ಮಾಡಿಕೊಳ್ಳಲಾಗಿದ್ದು, ಇವುಗಳ ಪೈಕಿ ಎರಡು ದೇಶಗಳೊಂದಿಗೆ (ಫಿನ್‌ಲ್ಯಾಂಡ್ ಹಾಗೂ ಸ್ವೀಡನ್ ದೇಶ) ಒಪ್ಪಂದಕ್ಕೆ ಸಹಿ ಮಾಡಲಾಗಿದೆ. ಇನ್ನುಳಿದ 6 ದೇಶಗಳೊಂದಿಗೆ ಒಪ್ಪಂದಕ್ಕೆ ಸಹಿ ಮಾಡುವ ಕಾರ್ಯವು ಪ್ರಗತಿಯಲ್ಲಿದೆ. |
| ಇ) ಹೂಡಿಕೆಯ ಸಂಬಂಧ ಒಡಂಬಡಿಕೆಗಳಾಗಿದ್ದಲ್ಲಿ, ಅವುಗಳು ಯಾವ ಹಂತದಲ್ಲಿವೆ? (ವಿವರ ನೀಡುವುದು) | ಬೆಂಗಳೂರು ಟೆಕ್ ಸಮ್ಮಿಟ್ 2020ರಲ್ಲಿ ವರ್ಚುವಲ್ ಸಮಾವೇಶದಲ್ಲಿ ಹೂಡಿಕೆ ಸಂಬಂಧ ಯಾವುದೇ ಒಡಂಬಡಿಕೆಗಳಾಗಿರುವುದಿಲ್ಲ. |

(ಐಟಿಬಿಟಿ 68 ಎಲ್‌ಸಿಎಂ 2020)

**(ಡಾ|| ಅಶ್ವಥ್ ನಾರಾಯಣ್ ಸಿ.ಎನ್)**
ಉಪಮುಖ್ಯಮಂತ್ರಿಗಳು ಹಾಗೂ ವಿದ್ಯುನ್ಮಾನ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು.




# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 134 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಐಹೊಳೆ ಡಿ.ಮಹಾಲಿಂಗಪ್ಪ (ರಾಯಭಾಗ) |
| ಉತ್ತರಿಸಬೇಕಾದ ದಿನಾಂಕ | : | 10.12.2020 |
| ಉತ್ತರಿಸಬೇಕಾದ ಸಚಿವರು | : | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ | ರಾಯಭಾಗ ಮತಕ್ಷೇತ್ರದಲ್ಲಿರುವ ರಾಯಭಾಗ ಹಾಗೂ ಚಿಕ್ಕೋಡಿ ತಾಲ್ಲೂಕು ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ರಾಯಭಾಗ ಮತಕ್ಷೇತ್ರದಲ್ಲಿರುವ ರಾಯಭಾಗ ಹಾಗೂ ಚಿಕ್ಕೋಡಿ ತಾಲ್ಲೂಕು ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ. |
| ಆ | ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಈ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮೇಲ್ದರ್ಜೆಗೇರಿಸಲಾಗುವುದು; ಈ ಕಾರ್ಯಕ್ಕಾಗಿ ಸರ್ಕಾರ ಮೀಸಲಿರಿಸಿರುವ ಅನುದಾನವೆಷ್ಟು; (ವಿವರ ನೀಡುವುದು) | ಅನ್ವಯಿಸುವುದಿಲ್ಲ |
| ಇ | ಇಲ್ಲದಿದ್ದಲ್ಲಿ, ಕಾರಣಗಳೇನು? (ಸಂಪೂರ್ಣ ವಿವರ ನೀಡುವುದು) | ಆರ್ಥಿಕ ವಿಸ್ತರತೆ ಇಲ್ಲದಿರುವುದರಿಂದ ಯಾವುದೇ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮೇಲ್ದರ್ಜೆಗೇರಿಸುವ ಪ್ರಸ್ತಾವನೆಗಳು ಸರ್ಕಾರದ ಪರಿಶೀಲನೆಯಲ್ಲಿರುವುದಿಲ್ಲ. |

ಸಂಖ್ಯೆ: ಆಕುಕ 141 ಎಸ್‌ಬಿವಿ 2020

(ಡಾ||ಕೆ.ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

6

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 394
2. ಸದಸ್ಯರ ಹೆಸರು : ಶ್ರೀ ಗಣೇಶ್ ಜೆ.ಎನ್ (ಕಂಪ್ಲಿ)
3. ಉತ್ತರಿಸಬೇಕಾದ ದಿನಾಂಕ : 10.12.2020
4. ಉತ್ತರಿಸುವ ಸಚಿವರು : ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಳ್ಳಾರಿ ಜಿಲ್ಲೆ, ಕಂಪ್ಲಿ ತಾಲ್ಲೂಕಿನ ಸಕ್ಕರೆ ಕಾರ್ಖಾನೆ ಸ್ಥಾಪಿತವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದಯೇ; | ಬಂದಿದೆ. |
| ಆ) | ಹಾಗಿದ್ದಲ್ಲಿ, ಈ ಸಕ್ಕರೆ ಕಾರ್ಖಾನೆಯನ್ನು ಯಾವಾಗ ಪ್ರಾರಂಭಿಸಲಾಯಿತು; | ಕಂಪ್ಲಿ ಸಹಕಾರಿ ಸಕ್ಕರೆ ಕಾರ್ಖಾನೆಯು ಸಹಕಾರ ಸಂಘಗಳ ಕಾಯ್ದೆಯಡಿಯಲ್ಲಿ 1955ರಲ್ಲಿ ನೋಂದಣಿಯಾಗಿದ್ದು, 1958 ರಿಂದ ಕಬ್ಬು ನುರಿಸುವ ಕಾರ್ಯವನ್ನು ಪ್ರಾರಂಭಿಸಿರುತ್ತದೆ. |
| ಇ) | ಪ್ರಸ್ತುತ ಸದರಿ ಕಾರ್ಖಾನೆ ಸ್ಥಗಿತಗೊಂಡಿರಲು ಕಾರಣವೇನು? (ಪೂರ್ಣ ವಿವರ ನೀಡುವುದು) | ಈ ಕಾರ್ಖಾನೆಯ ಕಬ್ಬು ಅರೆಯುವ ಸಾಮರ್ಥ್ಯ ಪ್ರಾರಂಭದಲ್ಲಿ 800 ಟಿಸಿಡಿಗಳಿದ್ದು, ನಂತರ 1200 ಟಿಸಿಡಿಗಳಿಗೆ ಹೆಚ್ಚಿಸಲಾಗಿತ್ತು ಹಾಗೂ ಈ ಕಾರ್ಖಾನೆಯು 176.51 ಎಕರೆ ಜಮೀನು ಹೊಂದಿರುತ್ತದೆ<br>ಕಾರ್ಖಾನೆಯ ಆರ್ಥಿಕ ಪರಿಸ್ಥಿತಿ ಹದಗೆಟ್ಟ ಹಿನ್ನೆಲೆಯಲ್ಲಿ ಸರ್ಕಾರವು ಈ ಕಾರ್ಖಾನೆಯನ್ನು ದಿನಾಂಕ21.07.1995ರಲ್ಲಿ ಸಮಾಪನಗೊಳಿಸಿ, ಸಮಾಪನಾಧಿಕಾರಿಗಳನ್ನು ನೇಮಿಸಿರುತ್ತದೆ. ನಂತರ ಸರ್ಕಾರವು ಈ ಕಾರ್ಖಾನೆಯನ್ನು ದಿನಾಂಕ: 02.03.1996 ರಂದು ಮೆ\|\| ಸುಂದರಿ ಶುಗರ್ಸ್ ಲಿ., ಹೈದರಾಬಾದ್ ಇವರಿಗೆ ರೂ.8.01 ಕೋಟಿಗಳಿಗೆ ಮಾರಾಟ ಮಾಡಿರುತ್ತದೆ.<br>ಸದರಿ ಮಾರಾಟ ಕರಾರು ಪತ್ರದ ಪ್ರಕಾರ ಖರೀದಿದಾರರು ಹಾಲಿ ಸ್ಥಳದಲ್ಲಿಯೇ ಕಾರ್ಖಾನೆಯನ್ನು ನಡೆಸಬೇಕು ಎಂಬ ನಿಬಂಧನೆ ಇರುತ್ತದೆ. ಆದರೆ, ಮೆ\|\| ಸುಂದರಿ ಶುಗರ್ಸ್‌ರವರು ಕಬ್ಬು ಅರೆಯುವ ಕಾರ್ಯವನ್ನು ನಿರ್ವಹಿಸಿರುವುದಿಲ್ಲ. ಇದಲ್ಲದೆ, ಕಾರ್ಖಾನೆಯ ಯಂತ್ರೋಪಕರಣಗಳನ್ನು ಬೇರೆಡೆಗೆ ಸಾಗಾಣಿಕೆ ಮಾಡಿ ಮಾರಾಟ ಮಾಡಿಕೊಂಡಿರುತ್ತಾರೆ ಎಂಬ ದೂರುಗಳು ಸಹ ಕಾರ್ಖಾನೆಯ ವಿರುದ್ಧ ಕೇಳಿ ಬಂದಿದ್ದವು.<br>ಈ ಹಿನ್ನೆಲೆಯಲ್ಲಿ ಸುಂದರಿ ಶುಗರ್ಸ್‌ರವರಿಗೆ ಆಗಿರುವ ಕಾರ್ಖಾನೆಯ ಜಮೀನು ಮಾರಾಟ ಒಪ್ಪಂದವನ್ನು ರದ್ದುಪಡಿಸಿ, ಸಾವಿರಾರು ರೈತರ ಹಿತದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಸಮಾಪನೆಯಲ್ಲಿರುವ ಈ ಕಾರ್ಖಾನೆಯನ್ನು ಪುನ:ಶ್ಚೇತನಗೊಳಿಸಲು ಆಗ್ರಹಿಸಿ ದಿನಾಂಕ 09.07.2015 ರಂದು ಕಂಪ್ಲಿ ಪಟ್ಟಣದಿಂದ ಕಾರ್ಖಾನೆವರೆಗೆ ವಿವಿಧ ಮಠಾಧೀಶರು ಬೃಹತ್ ಪಾದಯಾತ್ರೆಯನ್ನು ನಡೆಸಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿದ್ದರು. ಈ ಸಂಬಂಧ ಕೂಲಂಕಂಷವಾಗಿ ಪರಿಶೀಲಿಸಲಾಗಿ, ಈ ಕಾರ್ಖಾನೆಯ |

.....2

176.51 ಎಕರೆ/ ಸೆಂಟ್ಸ್ ಜಮೀನುಗಳನ್ನು ಮೆ|| ಸುಂದರಿ ಶುಗರ್ಸ್ ಲಿ., ಈ ಕಾರ್ಖಾನೆಗೆ ಮಾರಾಟ ಮಾಡಿದ್ದು, ಮಾರಾಟದ ಸಂದರ್ಭದಲ್ಲಿ ವಿಧಿಸಲಾಗಿದ್ದ ಷರತ್ತುಗಳನ್ನು ಮತ್ತು ಕಾರ್ಖಾನೆ ಹಾಗೂ ಖರೀದಿದಾರರ ನಡುವೆ ಏರ್ಪಟ್ಟಿರುವ ಕಾರ್ಖಾನೆಯ ಹಸ್ತಾಂತರದ ಷರತ್ತುಗಳನ್ನೊಳಗೊಂಡ ಒಡಂಬಡಿಕೆಯ ಷರತ್ತುಗಳನ್ನು ಸಹ ಉಲ್ಲಂಘಿಸಿರುವುದರಿಂದ ಕರ್ನಾಟಕ ಭೂಸುಧಾರಣಾ ಕಾಯ್ದೆ,1961ರ ಪ್ರಕರಣ 109(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕಂದಾಯ ಇಲಾಖೆಯು ಕಾರ್ಖಾನೆಯ 176.51 ಎಕರೆ ಜಮೀನನ್ನು ದಂಡವನ್ನಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತದೆ ಮತ್ತು ಈ ಜಮೀನಿನ ಎಲ್ಲಾ ಋಣಭಾರಗಳಿಂದ ಮುಕ್ತವಾಗಿ ರಾಜ್ಯ ಸರ್ಕಾರದಲ್ಲಿ ನಿಹಿತವಾಗತಕ್ಕದ್ದೆಂದು ಸರ್ಕಾರದ ಆದೇಶ ಸಂಖ್ಯೆ. ಆರ್‌ಡಿ/18/ಎಲ್‌ಆರ್‌ಎಂ/2017 ದಿನಾಂಕ 11.10.2017 ರಲ್ಲಿ ಆದೇಶ ಹೊರಡಿಸಲಾಗಿತ್ತು.

ಸದರಿ ಆದೇಶದ ವಿರುದ್ಧ ಮೆ|| ಸುಂದರಿ ಶುಗರ್ಸ್‌ರವರು ಮಾನ್ಯ ಉಚ್ಚ ನ್ಯಾಯಾಲಯ, ಧಾರವಾಡ ಪೀಠ ಇಲ್ಲಿ ರಿಟ್ ಅರ್ಜಿ ಸಂಖ್ಯೆ. 112167/2017 ನ್ನು ದಾಖಲಿಸಿದ್ದರು. ಈ ಸಂಬಂಧ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 21.10.2019 ರಂದು ಆದೇಶ ನೀಡಿದ್ದು, ಮೆ|| ಸುಂದರಿ ಶುಗರ್ಸ್‌ರವರು ರಾಜ್ಯ ಸರ್ಕಾರಕ್ಕೆ ನೀಡುವ ಮನವಿಯನ್ನು ಪರಿಗಣಿಸಿ, 6 ವಾರಗಳೊಳಗಾಗಿ ರಾಜ್ಯ ಸರ್ಕಾರದ ಆದೇಶ ಹೊರಡಿಸಲು ಸೂಚಿಸಿರುತ್ತದೆ. ಸದರಿ ಆದೇಶದಂತೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರ ಸಮಕ್ಷಮದಲ್ಲಿ ವಿಚಾರಣೆ ನಡೆಸಿ ದಿನಾಂಕ 19.03.2020 ರಂದು ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತಾರೆ.

" It would not be in the interest of the State to forfeit the land for the following reasons:

(a) Construction of a sugar factory by the Government would mean burden on the exchequer of the Government, on the contrary it is beneficial for the State if the sugar factory is started by the Petitioner as the factory would generate huge employment and also revenue for the State:

(b) It would be inappropriate to hold that the Company has violated Section 109(1)(i) of the Karnataka Land Reforms Act 1961 especially in the light of the fact that the permission to continue the industry was never accorded due to the various litigations pending before various authorities: (c) The land in question i.e., 59.02 Acres which is in agricultural

status as evident from the Sale Deed dated 05.03.1999 cannot be used for non-agricultural usage without obtaining appropriate permission from the appropriate authority;

(d) This authority has no power to direct the Official Liquidator to execute the registered sale deed for the remaining extent of 59.02 Acres as prayed for by the Petitioner cannot be granted. However, it is open for the Petitioner to approach the official liquidator independently.

(e) As per my discussion in Paragraphs 12 & 13 above, it is evident that the persons who are managing the company are indeed the directors of the company as per the Annual Reports submitted along with the reply to the Show Cause Notice.

In the above circumstances, the Representation of the Company is considered accordingly."ಈ ಹಿನ್ನೆಲೆಯಲ್ಲಿ ಸರ್ಕಾರವು ಆದೇಶ ಸಂಖ್ಯೆ. ಆರ್‌ಡಿ /66/ಎಲ್‌ಆರ್‌ಎ/2019 ದಿನಾಂಕ 04.07.2020 ರನ್ವಯ ಜಮೀನನ್ನು ದಂಡವನ್ನಾಗಿ ಮುಟ್ಟುಗೋಲು ಹಾಕಿಕೊಳ್ಳಲಾಗಿದ್ದ ಆದೇಶವನ್ನು ರದ್ದುಪಡಿಸಿ ಆದೇಶಿಸಲಾಗಿದೆ. ತದನಂತರ ಸರ್ಕಾರದ ಆದೇಶ ಸಂಖ್ಯೆ ಆರ್‌ಡಿ/66/ಎಲ್‌ಆರ್‌ಎ/2019 ದಿನಾಂಕ 22.07.2020 ರನ್ವಯ ಸದರಿ ಜಮೀನಿನ ಖಾತೆಯನ್ನು ಮೆ|| ಸುಂದರಿ ಶುಗರ್ಸ್ ಲಿ., ಇವರಿಗೆ ಹಕ್ಕು ಬದಲಾವಣೆ ಮಾಡಲು ಹಾಗೂ ಆರ್‌ಓಆರ್‌ನ ಕಾಲಂ 11 ರಲ್ಲಿ ವಿಧಿಸಿರುವ ಷರತ್ತು ಅಂದರೆ ಸದರಿ ಜಮೀನನ್ನು ಮಾರಾಟ ಅಥವಾ ಅಡಮಾನ ಇಡತಕ್ಕದ್ದಲ್ಲ ಎಂಬುದನ್ನು ತೆಗೆಯುವುದಕ್ಕೆ ಸೂಕ್ತ ಕ್ರಮ ಕೈಗೊಳ್ಳುವಂತೆಯೂ ಸಹ ಆದೇಶಿಸಲಾಗಿದೆ. ಮಾನ್ಯ ಉಚ್ಚ ನ್ಯಾಯಾಲಯವು ನೀಡಿರುವ ಆದೇಶದನ್ವಯ ಹಾಗೂ ಸರ್ಕಾರದ ಆದೇಶಗಳಲ್ಲಿ ನೀಡಿರುವ ಸೂಚನೆಗಳನ್ವಯ ಮುಂದಿನ ಕ್ರಮ ಕೈಗೊಳ್ಳಲು ಕಾರ್ಖಾನೆಯ ಸಮಾಪನಾಧಿಕಾರಿಗಳಿಗೆ ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶನಾಲಯದಿಂದ ದಿನಾಂಕ 10.08.2020 ಮತ್ತು 07.09.2020 ರಂದು ಸೂಚನೆಗಳನ್ನು ಸಹ ನೀಡಲಾಗಿರುತ್ತದೆ.

ಕಾರ್ಖಾನೆಯನ್ನು ಈಗಾಗಲೇ ಖಾಸಗಿಯವರಿಗೆ ಮಾರಾಟ ಮಾಡಿರುವುದರಿಂದ ಮತ್ತು ಸಹಕಾರ ಸಂಘಗಳ ಕಾಯ್ದೆಯಡಿಯಲ್ಲಿ ಸಮಾಪನೆಗೊಳಿಸಿ ಸಮಾಪನಾಧಿಕಾರಿಗಳನ್ನು ನೇಮಕ ಮಾಡಿರುವುದರಿಂದ ಕಾರ್ಖಾನೆಯು ಸ್ಥಗಿತಗೊಂಡಿರುತ್ತದೆ.

ಸಂಖ್ಯೆ: ಸಿಐ 277 ಸಿಓಎಫ್ 2020

(ಅರಬೈಲ್ ಶಿವರಾಮ ಹೆಬ್ಬಾರ)
ಕಾರ್ಮಿಕ ಮತ್ತು ಸಕ್ಕರೆ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| 1) | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 802 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ದಿನಕರ್ ಕೇಶವ್ ಶೆಟ್ಟಿ (ಕುಮಟ) |
| 3) | ಉತ್ತರಿಸಬೇಕಾದ ದಿನಾಂಕ | 10/12/2020 |
| 4) | ಉತ್ತರಿಸುವವರು | ಉಪ ಮುಖ್ಯಮಂತ್ರಿಗಳು ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು |

************

| ಕ್ರ ಸಂ | ಪ್ರಶ್ನೆ | ಉತ್ತರ | |
|---|---|---|---|
| ಅ) | ಕುಮಟಾ ಹೊನ್ನಾವರ ವಿಧಾನಸಭಾ ಕ್ಷೇತ್ರದಲ್ಲಿ ಬರುವ ಹೊನ್ನಾವರ ಮತ್ತು ಕುಮಟಾ ಐ.ಟಿ.ಐ. ಕಾಲೇಜುಗಳಲ್ಲಿ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. | Yes. |
| ಆ) | ಬಂದಿದ್ದಲ್ಲಿ, ಈ ಹುದ್ದೆಗಳನ್ನು ಯಾವಾಗ ಭರ್ತಿ ಮಾಡಲಾಗುವುದು; | ಇಲಾಖೆಯ ತರಬೇತಿ ವಿಭಾಗದಲ್ಲಿ ಖಾಲಿ ಇರುವ 1520 ಕಿರಿಯ ತರಬೇತಿ ಅಧಿಕಾರಿಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆ ಸಲ್ಲಿಸಿದ್ದು, ಕರ್ನಾಟಕ ಲೋಕಸೇವಾ ಆಯೋಗದಿಂದ ಅಭ್ಯರ್ಥಿಗಳ ಮೂಲ ದಾಖಲೆಗಳ ಪರಿಶೀಲನಾ ಕಾರ್ಯ ಪೂರ್ಣಗೊಂಡಿದ್ದು, ಆಯ್ಕೆಪಟ್ಟಿಯನ್ನು ನಿರೀಕ್ಷಿಸಲಾಗಿದೆ. ಆಯ್ಕೆ ಪಟ್ಟಿ ಸ್ವೀಕೃತಗೊಂಡ ತಕ್ಷಣ ನೇಮಕಾತಿ ಆದೇಶ ಹೊರಡಿಸಲು ಕ್ರಮ ಕೈಗೊಳ್ಳಲಾಗುವುದು.<br><br>ಮುಂದುವರೆದು, ಕರ್ನಾಟಕ ಲೋಕಸೇವಾ ಆಯೋಗದಿಂದ 26 ಪ್ರಥಮ ದರ್ಜೆ ಸಹಾಯಕರ ಆಯ್ಕೆ ಪಟ್ಟಿ ಸ್ವೀಕೃತಗೊಂಡಿದ್ದು, ಸದರಿ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಪ್ರಕ್ರಿಯೆ ಪರಿಶೀಲನೆಯಲ್ಲಿದೆ. | Proposals have been forwarded to the Karnataka Public Service Commission for filing up 1520 vacant Junior Training Officer posts in the Training Wing of the Department. The verification work of these candidates has been completed by KPSC and the selection list is awaited. Action will be taken to issue appointment orders as soon as the select list is received.<br><br>Further, the selected list of 26 First Division Assistants has been received from the Karnataka Public Service Commission. The process of issuing appointment orders for these candidates is under review. |
| ಇ) | ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಬೋಧಕ ಸಿಬ್ಬಂದಿಗಳ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರಕ್ಕಿರುವ ತೊಂದರೆಗಳೇನು? (ವಿವರ ನೀಡುವುದು) | ಬೋಧಕ ಸಿಬ್ಬಂಧಿಗಳ ಹುದ್ದೆಗಳನ್ನು ಭರ್ತಿ ಮಾಡಲು ಯಾವುದೇ ತೊಂದರೆ ಇರುವುದಿಲ್ಲ. ಡಿಜಿಟಿ, ನವದೆಹಲಿ ಇವರ ಪಠ್ಯಾನುಸಾರ ಬೋಧನಾ ಕ್ರಿಯೆಗೆ ಯಾವುದೇ ತೊಂದರೆಯಾಗದಂತೆ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಪ್ರಸ್ತುತ ಸದರಿ ಸಂಸ್ಥೆಗಳಲ್ಲಿ ಖಾಲಿ ಇರುವ ಬೋಧಕ ಸಿಬ್ಬಂಧಿಗಳ ಎದುರಿಗೆ ಅತಿಥಿ ಬೋಧಕರನ್ನು ನೇಮಕ ಮಾಡಿಕೊಂಡು ತರಬೇತಿ ಕಾರ್ಯವನ್ನು ನಿರ್ವಹಿಸಲಾಗುತ್ತಿದೆ. | There are no hurdles in filling up the posts of teaching staff. At present, training is being provided as per DGT (Director General of Training) syllabus in the respective Government Industrial Training Institutes by engaging guest lecturers against the vacant posts of the teaching staff. |

ಸಂಖ್ಯೆ: ಕೌಉಜೀಇ 65 ಕೈತಪ್ರ 2020

(ಡಾ.ಸಿ.ಎನ್.ಅಶ್ವಥ ನಾರಾಯಣ)
ಉಪ ಮುಖ್ಯಮಂತ್ರಿಗಳು ಹಾಗೂ
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : 917 |
| ಮಾನ್ಯ ಸದಸ್ಯರ ಹೆಸರು | : ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ) |
| ಉತ್ತರಿಸಬೇಕಾದ ದಿನಾಂಕ | : 10.12.2020 |
| ಉತ್ತರಿಸಬೇಕಾದ ಸಚಿವರು | : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ | ಆಯುಷ್ಮಾನ್ ಭಾರತ್ ಆರೋಗ್ಯ ಕರ್ನಾಟಕ ಯೋಜನೆಯಡಿಯಲ್ಲಿ ಕಿಡ್ನಿ ಡಯಾಲಿಸಿಸ್, ನ್ಯೂಕ್ಲಿಯರ್ ಮೆಡಿಸಿನ್, ಜೆ.ಬಿ.ಸಿಂಡ್ರೋಮ್, ಬೋನ್ ಮ್ಯಾರೋ ಟ್ರಾನ್ಸ್ ಪ್ಲಾಂಟ್ ಇತ್ಯಾದಿ ಗಂಭೀರ ಕಾಯಿಲೆಗಳ ಮತ್ತು ಜೀವನ ಪರ್ಯಂತ ಚಿಕಿತ್ಸೆ ಪಡೆಯಬೇಕಾದ ಕಾಯಿಲೆಗಳ ಹೆಸರುಗಳ ಸಹಿತ ಕೋಡ್ ಸಂಖ್ಯೆಗಳು ಸೇರದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಆಯುಷ್ಮಾನ್ ಭಾರತ್ ಆರೋಗ್ಯ ಕರ್ನಾಟಕ ಯೋಜನೆಯಡಿಯಲ್ಲಿ ಕಿಡ್ನಿ ಡಯಾಲಿಸಿಸ್ ಸೌಲಭ್ಯಕ್ಕಾಗಿ 2A.S1.00214, 2A.S1.00252, 3A.M3.00004 ಪ್ಯಾಕೇಜ್ ಕೋಡ್‌ಗಳು ಲಭ್ಯವಿದ್ದು, ಈ ಪ್ಯಾಕೇಜ್‌ಗಳನ್ನು ಡಯಾಲಿಸಿಸ್‌ಗಳಿಗಾಗಿ ಬಳಸಿಕೊಳ್ಳಲಾಗಿದೆ.<br><br>ನ್ಯೂಕ್ಲಿಯರ್ ಮೆಡಿಸಿನ್ ಸೌಲಭ್ಯವು ಕೆಲವು ಚಿಕಿತ್ಸೆಗಳನ್ನು ಗುರುತಿಸುವುದಕ್ಕಾಗಿ ಹಾಗೂ ಚಿಕಿತ್ಸೆಗಾಗಿ ಬಳಸುತ್ತಿದ್ದು, ಈ ಪ್ಯಾಕೇಜ್ ಕೋಡ್‌ಗಳು ಅಲ್ಪ ಪ್ರಮಾಣದಲ್ಲಿ ಲಭ್ಯವಿರುತ್ತದೆ. ಜೆ.ಬಿ.ಸಿಂಡ್ರೋಮ್‌ಗಾಗಿ ವೈದ್ಯಕೀಯ ತಜ್ಞತೆಯಲ್ಲಿ ಸಾಮಾನ್ಯ ಚಿಕಿತ್ಸೆಗಾಗಿ 2B.M1.00061, A, B, C ಹಾಗೂ ಶಿಶುರೋಗ ತಜ್ಞತೆಯಲ್ಲಿ 4A.M2.00082 , A, B, C ಪ್ಯಾಕೇಜ್ ಸೌಲಭ್ಯಗಳು ಇರುತ್ತವೆ. ಅಂತಹ ಗಂಭೀರ ಖಾಯಿಲೆಯಿಂದ ಆಗುತ್ತಿರುವ ಪರಿಣಾಮಗಳಿಗಾಗಿ ಚಿಕಿತ್ಸಾ ಪ್ಯಾಕೇಜ್ ಕೋಡ್‌ಗಳಿದ್ದು, ಇದರ ಚಿಕಿತ್ಸೆಗಾಗಿ ಬಳಸಿಕೊಳ್ಳಬಹುದಾಗಿದೆ. ಬೋನ್ ಮ್ಯಾರೋ ಟ್ರಾನ್ಸ್‌ಪ್ಲಾಂಟ್ ಚಿಕಿತ್ಸಾ ವಿಧಾನವು ಸೇರ್ಪಡೆಗೊಳಿಸುವ ಬಗ್ಗೆ ಪ್ರಸ್ತಾವನೆ ಪರಿಶೀಲನೆಯಲ್ಲಿದೆ ಮತ್ತು ಜೀವನ ಪರ್ಯಂ ತ ಚಿಕಿತ್ಸೆ ಪಡೆಯಬೇಕಾದ ಹಲವು ಖಾಯಿಲೆಗಳ ಹೆಸರುಗಳ ಕೋಡ್‌ಗಳು ಲಭ್ಯವಿರುವುದಿಲ್ಲ. |
| ಆ | ಸದರಿ ಯೋಜನೆಯಡಿಯಲ್ಲಿ ಬಿಟ್ಟು ಹೋದ ಕಾಯಿಲೆಗಳ ಹೆಸರುಗಳ ಸಹಿತ ಕೋಡ್ ಸಂಖ್ಯೆಗಳನ್ನು ಸೇರ್ಪಡೆ ಮಾಡಿ ಬಡ ರೋಗಿಗಳಿಗೆ ಸರ್ಕಾರ ನೆರವಾಗುವುದೇ? | ಸದರಿ ಯೋಜನೆಯಡಿಯಲ್ಲಿ ಬಿಟ್ಟು ಹೋದ ಖಾಯಿಲೆಗಳ ಹೆಸರುಗಳ ಸಹಿತ ಕೋಡ್ ಸಂಖ್ಯೆಗಳನ್ನು ಸೇರ್ಪಡೆ ಮಾಡಲು ತಜ್ಞ ಸಮಿತಿಯು ರಚನೆಯಾಗಿದ್ದು, ಪರಿಶೀಲನೆಯಲ್ಲಿರುತ್ತದೆ. |

ಸಂಖ್ಯೆ: ಆಕುಕ 136 ಎಸ್ ಬಿ ವಿ 2020

(ಡಾ||ಕೆ.ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

9

**ಮಾನ್ಯ ಕರ್ನಾಟಕ ವಿಧಾನ ಸಭಾ ಸದಸ್ಯರಾದ ಶ್ರೀ ಬಸವನಗೌಡ ದದ್ದಲ(ರಾಯಚೂರು ಗ್ರಾಮಾಂತರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 426ಕ್ಕೆ ಸಂಬಂಧಿಸಿದಂತೆ ಪೂರಕ ಟಿಪ್ಪಣಿ**

*******

2017-18ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ 101ರಲ್ಲಿ ಹೊಸದಾಗಿ ರಾಯಚೂರು ವಿಶ್ವವಿದ್ಯಾನಿಲಯವನ್ನು 2017-18ನೇ ಶೈಕ್ಷಣಿಕ ಸಾಲಿನಿಂದ ಪ್ರಾರಂಭಿಸುವುದಾಗಿ ಘೋಷಿಸಲಾಗಿತ್ತು. ಗುಲ್ಬರ್ಗ ವಿಶ್ವವಿದ್ಯಾನಿಲಯವು ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ 2000ರಡಿ ಕಾರ್ಯನಿರ್ವಹಿಸುತ್ತಿದ್ದು, ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ, 2020ನ್ನು ಜಾರಿಗೆ ತರುವ ಮೂಲಕ ರಾಯಚೂರು ವಿಶ್ವವಿದ್ಯಾಲಯವನ್ನು ಗುಲ್ಬರ್ಗ ವಿಶ್ವವಿದ್ಯಾನಿಲಯದಿಂದ ವಿಭಜಿಸಿ ಗುಲ್ಬರ್ಗ ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರವಾದ ಯರಗೇರಾದಲ್ಲಿ ರಾಯಚೂರು ವಿಶ್ವವಿದ್ಯಾನಿಲಯವನ್ನು ಪ್ರಾರಂಭಿಸಲಾಗಿರುತ್ತದೆ.

ರಾಯಚೂರು ವಿಶ್ವವಿದ್ಯಾಲಯವನ್ನು ನೂತನವಾಗಿ ದಿನಾಂಕ:01.08.2020ರಿಂದ ಜಾರಿಗೆ ಬರುವಂತೆ ಸ್ಥಾಪಿಸಿದ್ದು, ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 236 ಯುಆರ್‌ಸಿ 2019 (ಭಾ-1), ದಿನಾಂಕ: 07-11-2020ರಿಂದ ಜಾರಿಗೆ ಬರುವಂತೆ ಪ್ರೊ. ಹರೀಶ್ ರಾಮಸ್ವಾಮಿ, ಪ್ರಾಧ್ಯಾಪಕರು, ರಾಜ್ಯಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರನ್ನು ರಾಯಚೂರು ವಿಶ್ವವಿದ್ಯಾನಿಲಯದ ನೂತನ ಕುಲಪತಿಗಳಾಗಿ ನೇಮಿಸಿ ಆದೇಶಿಸಿದೆ.

ಪ್ರಸ್ತುತ ರಾಯಚೂರು ವಿಶ್ವವಿದ್ಯಾಲಯಕ್ಕೆ ನೂತನ ಕುಲಪತಿಗಳ ನೇಮಕಾತಿ ಆಗಿದ್ದು, ವಿಶ್ವವಿದ್ಯಾಲಯದ ಸುಗಮ ಆಡಳಿತ ಕಾರ್ಯನಿರ್ವಹಣೆಗಾಗಿ ಕುಲಸಚಿವ (ಆಡಳಿತ), ಕುಲಸಚಿವ (ಮೌಲ್ಯಮಾಪನ), ಹಣಕಾಸು ಅಧಿಕಾರಿಗಳ ನೇಮಕಾತಿ ಕುರಿತಂತೆ ಸರ್ಕಾರದ ಹಂತದಲ್ಲಿ ಕ್ರಮವಹಿಸಲಾಗುತ್ತಿದೆ. ಈ ಮಧ್ಯೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 50 ಯುಜಿವಿ 2020, ದಿನಾಂಕ: 04-12-2020ರಲ್ಲಿ ಗುಲ್ಬರ್ಗ ವಿಶ್ವವಿದ್ಯಾನಿಲಯದ ಹಣಕಾಸು ಅಧಿಕಾರಿಯನ್ನು ರಾಯಚೂರು ವಿಶ್ವವಿದ್ಯಾಲಯದ ಹಣಕಾಸು ಅಧಿಕಾರಿ ಹುದ್ದೆಗೆ ಅಧಿಕ ಪ್ರಭಾರದಲ್ಲಿರಿಸಿದೆ. ವಿಶ್ವವಿದ್ಯಾನಿಲಯದ ಶೈಕ್ಷಣಿಕ ಪ್ರಕ್ರಿಯೆಗಳನ್ನು ಸುಗಮವಾಗಿ ನಡೆಸಲು ವಿಶ್ವವಿದ್ಯಾನಿಲಯವು ವಿವಿಧ ಪ್ರಾಧಿಕಾರಗಳನ್ನು ರಚನೆ ಮಾಡಬೇಕಾಗಿರುತ್ತದೆ.

ಮುಂದುವರೆದು, ಗುಲ್ಬರ್ಗ ವಿಶ್ವವಿದ್ಯಾಲಯದಿಂದ ರಾಯಚೂರು ವಿಶ್ವವಿದ್ಯಾನಿಲಯಕ್ಕೆ ಚರ ಮತ್ತು ಸ್ಥಿರಾಸ್ತಿಗಳನ್ನು ವರ್ಗಾಯಿಸಿದ ನಂತರ ಹಂತ ಹಂತವಾಗಿ ಬೋಧಕ ಮತ್ತು ಬೋಧಕೇತರ ಹುದ್ದೆಗಳ ನೇಮಕಾತಿ ಕುರಿತಂತೆ ಕ್ರಮವಹಿಸಲಾಗುವುದು.

******



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 754
ಮಾನ್ಯ ಸದಸ್ಯರ ಹೆಸರು : ಶ್ರೀ ರಾಮದಾಸ್ ಎಸ್.ಎ (ಕೃಷ್ಣರಾಜ)
ಉತ್ತರಿಸಬೇಕಾದ ದಿನಾಂಕ : 10.12.2020
ಉತ್ತರಿಸಬೇಕಾದ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರ |
|---|---|---|
| ಅ | ರಾಜ್ಯದಲ್ಲಿ ಕರ್ನಾಟಕ ಖಾಸಗಿ ವೈದ್ಯಕೀಯ ಸಂಸ್ಥೆಗಳ ಅಧಿನಿಯಮವು ಪ್ರಸ್ತುತ ಜಾರಿಗೆ ಬಂದಿದೆಯೇ; | ರಾಜ್ಯದಲ್ಲಿ ಕರ್ನಾಟಕ ಖಾಸಗಿ ವೈದ್ಯಕೀಯ ಸಂಸ್ಥೆಗಳ ಅಧಿನಿಯಮವು ಪ್ರಸ್ತುತ ಜಾರಿಗೊಳಿಸಲಾಗಿದೆ. |
| ಆ | ಕರ್ನಾಟಕ ಖಾಸಗಿ ವೈದ್ಯಕೀಯ ಸಂಸ್ಥೆಗಳ ಅಧಿನಿಯಮವನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸಲು ಸರ್ಕಾರವು ಸಮಿತಿಯನ್ನೇನಾದರೂ ರಚಿಸಿದೆಯೇ; | ಮೂರು ಸಮಿತಿಗಳನ್ನು ರಚಿಸಲಾಗಿದೆ.<br><br>ಸಮಿತಿಗಳು ಈ ಕೆಳಗಿನಂತಿವೆ: |
| ಇ | ರಚಿಸಿದ್ದಲ್ಲಿ, ಆ ಸಮಿತಿಯಲ್ಲಿರುವ ಸದಸ್ಯರ ವಿವರಗಳು ಹಾಗೂ ಆ ಸಮಿತಿಯು ಸಭೆಗಳನ್ನೇನಾದರೂ ನಡೆಸಿದಲ್ಲಿ ಅದರ ವಿವರಗಳನ್ನು ನೀಡುವುದು; | 1. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ,<br>2. ನಿರ್ದೇಶಕರು/ಡೀನ್ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ ಇವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ,<br>3. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ,<br><br>ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರ ಅಧ್ಯಕ್ಷತೆಯಲ್ಲಿ ದಿನಾಂಕ:05.08.2019 ಹಾಗೂ 17.12.2019ರಂದು ಸಭೆಗಳು ನಡೆದಿವೆ. (ವಿವರಗಳನ್ನು ಅನುಬಂಧದಲ್ಲಿರಿಸಿದೆ.) |
| ಈ | ಕರ್ನಾಟಕ ಖಾಸಗಿ ವೈದ್ಯಕೀಯ ಸಂಸ್ಥೆಗಳ ಅಧಿನಿಯಮವು ರಾಜ್ಯದಲ್ಲಿ ಅನುಷ್ಠಾನವಾಗದಿದ್ದಲ್ಲಿ ಅದರ ವಿಳಂಬಕ್ಕೆ ಕಾರಣಗಳೇನು; ಇದರ ಅನುಷ್ಠಾನಕ್ಕಾಗಿ ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ಕರ್ನಾಟಕ ಖಾಸಗಿ ವೈದ್ಯಕೀಯ ಸಂಸ್ಥೆಗಳ ಅಧಿನಿಯಮವನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸಲಾಗಿದೆ. |

ಸಂಖ್ಯೆ: ಆಕುಕ 77 ಎಸ್‌ಟಿಕ್ಯೂ 2020

(ಡಾ||ಕೆ.ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

ಅನುಬಂಧ

10

**oceedings of KPME Expert Committee Meeting held u/c of ommissioner, HFW Services on 05-08-2019 at 12:30 pm**

**Members Present:-**

| SL NO. | NAME | DESIGNATION |
|---|---|---|
| 1. | Sri Pankaj Kumar Pandey | Commissioner of Health & F. W. Services and Chairman, Expert Committee for KPME |
| 2. | Dr. T. S. Prabhakar | Director, Health & F. W. Services and Member Secretary of Expert Committee |
| 3. | Dr. R. Ravikumar | Professor, Dept of Neuromicrobiology, NIMHANS, Bengaluru. |
| 4. | Dr. K. Jagadeesh | Joint Director (Medical), Health & F. W. Services. |
| 5. | Dr. Vivek Dorai | Deputy Director (Medical-2), Health & F. W. Services. |
| 6. | Dr. Sridhar | Joint Director, Dept of AYUSH. |
| 7. | Dr. S. C. Nagendra Swamy | Non Officio Member, Expert Committee and Advisor, Manipal Group Of Hospitals. |
| 8. | Dr. Madan. S. Gaekwad | Non Officio Member, Expert Committee, President of Sagar Hospital and PHANA, Bengaluru. |

A meeting was convened under the Chairmanship of Commissioner, HFW Services for recommending classification, standards of Infrastructure, Staffing Pattern and Staff Qualification for the purpose of section 9 and 9A of the KPME act.

Director, HFW Services welcomed members and requested Commissioner HFW Services to chair the meeting.

**Discussion Points:**

**1) Regarding Rules and Responsibility**

- The committee considered in detail Clinical Establishment Act of 2010 prescribing minimum standards of Infrastructure, Staffing Pattern and Staff Qualification.
- It was noticed by the committee that non medical persons are heading certain facilities. In such instances, non medical person heading facility shall ensure that a medical person be nominated as the head.

**2) Regarding Category No. 16 and 17 (Medical Diagnostic Laboratory and Diagnostic Imaging Centre)**

- There are 18 categories under the KPME Act. Category 16 & 17 pertains to Medical Diagnostic Laboratory and Diagnostic Imaging Centre. Since category 16 & 17 are established as a single entity in

health facilities, the committee agreed to seek amendment to combine category 16 & 17.

- Regarding Category No. 15 (AYUSH Therapy Centre), check list of AYUSH Therapy centre is ready and awaiting approval of Commissioner, AYUSH.

3) **Regarding Display of Rates for Procedures**

- It was brought to the notice of committee that more than 20,000 procedures are being performed in certain major health facilities and it may not be feasible to display the rate of all such procedures. The committee discussed and agreed to display rate of common procedures on the notice board and the rate of the remaining procedures to be displayed on the website of the concerned health facility.
- Display of the rates for various procedures shall be made available 24x7 at reception area or designated area of hospitals, nursing homes and clinics.
- Provision for clarification by the public regarding Rates/Procedures/Patient Chart etc., to be displayed on the website and public should be able to access the portal.

4) **Regarding Category No. 1 and 6 (Clinic/Polyclinic only Consultation and Health Check-up Centre)**

- The committee discussed the issue of overlapping of health check up and consultancy and agreed to seek amendment of such overlapping procedures.

5) **Regarding Tele Medicine**

- Tele Medicine is not mentioned in the 18 categories listed under registration of Private Medical Establishment of chapter-3 of KPME Act. However, the committee discussed rolé of tele medicine and concluded video consultancy alone is not sufficient for establishment of diagnosis and needs physical examination also.

6) **Regarding KPME Portal**

- Public should be able to access KPME portal.
- Health facility shall prominently display KPME registration number including validity period on a board measuring not less than 60cmx8cm in the reception area of the hospital.

Deputy Director (Medical-2) shall circulate soft copy of clinical establishment source codes to all members of the committee providing clarity on what to publish regarding packages and guidelines.

The meeting concluded with vote of thanks by Deputy Director (Medical-2).

**Commissioner**
**&**
**Chairman, Expert Committee of KPME**
**Health & Family Welfare Services,**
**Bengaluru.**

**Proceedings of KPME 2nd Expert Committee Meeting held u/c of Commissioner, HFW Services on 17-12-2019 at 3:00 pm**

**Members Present:-**

| SL NO. | NAME | DESIGNATION |
|---|---|---|
| 1. | Sri Pankaj Kumar Pandey | Commissioner of Health & F. W. Services and Chairman, Expert Committee for KPME. |
| 2. | Dr. Om Prakash Patil | Director, Health & F. W. Services. and Member Secretary of Expert Committee |
| 3. | Dr. Srinivas | Joint Director (Medical), Health & F. W. Services. |
| 4. | Dr. Vivek Dorai | Deputy Director (Medical-2), Health & F. W. Services. |
| 5. | Dr. M. Prakash Kumar | Joint Director, Dept of AYUSH. |
| 6. | Dr. Madan. S. Gaekwad | Non Officio Member, Expert Committee, President of Sagar Hospital and PHANA, Bengaluru. |
| 7. | Dr. Suresh Shapeti (representing Prof. B.N. Gangadhar) | Non Officio Member, Expert Committee, President of Public Health Foundation of India. |

A meeting was convened under the Chairmanship of Commissioner, HFW Services for recommending classification, standards of Infrastructure, Staffing Pattern and Staff Qualification for the purpose of section 9 and 9A of the KPME act.

Director, HFW Services welcomed members and requested Commissioner, HFW Services to chair the meeting.

**Discussion Points:**

1) **Under KPME Amendment to Rule 3 - Category No. 16 and 17 (Medical Diagnostic Laboratory and Diagnostic Imaging Centre).**

   Dr. Madan. S. Gaekwad, Non Officio Member, Expert Committee, President of Sagar Hospital and PHANA, Bengaluru raised that Category 16 and 17 (Medical Diagnostic Laboratory and Diagnostic Imaging Centre) are similar. Committee had a long discussion on this and decided that Category 16 and 17 (Medical Diagnostic Laboratory and Diagnostic Imaging Centre) are separate entities.

**2) Under KPME Amendment to Rule 3 – Category 1 and 5(Clinic/Polyclinic only consultation and Health Check-up centre)**

Dr. Madan. S. Gaekwad, Non Officio Member, Expert Committee, President of Sagar Hospital and PHANA, Bengaluru opinioned that Category 1 and 5 (Clinic/Polyclinic only consultation and Health Check-up centre) are similar, Category 5(Health Check-up centre) should be a part of Category 1(Clinic/Polyclinic only consultation). Committee discussed on this and decided that Category 1 and 5(Clinic/Polyclinic only consultation and Health Check-up centre) are separate entities.

**3) Under KPME Act Section 11 - Obligations of Private Medical Establishment. Establishers have to specify their periodical reports in upgraded KPME Portal.**

Committee decided to collect the reports of Communicable diseases, Non-Communicable diseases, General information, Specialty wise Reports, Specific information, Additional reports and dialysis reports in a monthly basis for to have statistics of health programme and Separate ID will be given to each HCF to submit the reports.

**4) Under KPME Act section 18 Private Medical Establishments to report the names of government doctors on their establishments – Every Private Medical Establishment shall report to the State Government and the Registration Authority, the names of government doctors and Para medical staff, whose services are utilized in the Private Medical Establishments for consultations or any other basic whether on payment basic or not.**

Reported the names of government doctors on Private Medical establishment website.

**5) Qualification-HR**

Dr. Madan. S. Gaekwad, Non Officio Member, Expert Committee, President of Sagar Hospital and PHANA, Bengaluru started that qualified paramedical and doctors are not adequate.

- Qualification is should be as per the Clinical Establishment Act.
- Qualified Medical Practioners and paramedics are mandatory and training can be given if necessary.
- To start the establishments they should have qualified manpower, if they registered in KPME they have to follow the minimum standards.

- During Inspection minimum standards needs to be checked to provide the KPME License and checklist is provided in the upgraded software which will be mandatory to check during inspection.

**6) KPME Software is upgraded and Live Trial is going on in Bangalore Urban District. Once the live trial is done, KPME upgraded Portal will be launched. Registration or Renewal processing fee shall be paid online on the website http://kpme.karnataka.gov.in/ newdesign/ home.aspx.**

Pursuing live trial in Bangalore urban and Verification of the establishment is going on. Live trial will be completed within a month.

**7) Trade License**

- Dr. Madan. S. Gaekwad, Non Officio Member, Expert Committee, President of Sagar Hospital and PHANA, Bengaluru discussed that they are not demanding for trade license in Dakshina Kannada district, Committee discussed on this and decided to get the clarification on trade license whether it is mandatory or not from Urban Development department.

**8) Occupancy Certificate / Rental Agreement**

- Most of the doctors do not be have OC, committee decided to provide the Rental agreement.
- Committee agreed to get the opinion from legal advisor on Rental agreement to amend the KPME Rules.

**9) Fire Safety Certificate**

- In exercise of powers conferred under section 13 of the Karnataka Fire Services Act, 1964 the government of Karnataka hereby frames preventive measures for buildings of 15mts and above in height in respect of the high rise buildings are eligible to get NOC from Fire Safety Emergency Services and along with that, NOC from Pollution Control board. Nowhere mentioned about Fire NOC for the buildings below 15mts in height whether it can be exempted. Committee decided that buildings below 15mts in height are exempted from providing fire NOC until any clarification from Fire Safety department.

**10) Existing establishment in upgraded KPME Portal**

- Existing establishment's data should be transferred from old software to upgraded KPME software.
- Re-registering of existing establishments is not required.



## ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ, 8ನೇ ಅಧಿವೇಶನ)

| | | | |
|---|---|---|---|
| 1) | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 139 |
| 2) | ಸದಸ್ಯರ ಹೆಸರು | : | ಶ್ರೀ ಕುಮಾರಸ್ವಾಮಿ. ಎಂ.ಪಿ (ಮೂಡಿಗೆರೆ) |
| 3) | ಉತ್ತರಿಸುವ ದಿನಾಂಕ | : | 10-12-2020 |
| 4) | ಉತ್ತರಿಸುವವರು | : | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮೂಡಿಗೆರೆ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಆನೆಗಳ ಹಾವಳಿ ಹೆಚ್ಚಾಗಿದ್ದು, ರೈತರ ಬೆಳೆಗಳನ್ನು ಹಾಳು ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಇಲ್ಲಿಯವರೆಗೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಚಿಕ್ಕಮಗಳೂರು ವಿಭಾಗ ವ್ಯಾಪ್ತಿಯಲ್ಲಿ ಕಾಡಾನೆಗಳ ಹಾವಳಿ ತಡೆಗಟ್ಟಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>1. ಮೂಡಿಗೆರೆ ಮತಕ್ಷೇತ್ರದ ವ್ಯಾಪ್ತಿಗೆ ಮೂಡಿಗೆರೆ, ಆಲ್ದೂರು ಮತ್ತು ಮುತ್ತೋಡಿ ವಲಯಗಳು ಸೇರಿದ್ದು, ಕಾಡಾನೆಗಳು ಜನವಸತಿ ಪ್ರದೇಶಕ್ಕೆ ಬಾರದಿರುವಂತೆ ಆನೆ ನಿರೋಧಕ ಕಂದಕ, ಸೋಲಾರ್ ತಂತಿ ಬೇಲಿ, ಟೆಂಟಿಕಲ್ ಫೆನ್ಸಿಂಗ್, ಆರ್.ಸಿ.ಸಿ. ಪಿಲ್ಲರ್‌ಗಳು ಇತ್ಯಾದಿಗಳನ್ನು ನಿರ್ಮಿಸಲಾಗಿದೆ.<br>2. 2016-17 ಇಂದೀಚೆಗೆ ಮೂಡಿಗೆರೆ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಒಟ್ಟು 21.00 ಕಿ.ಮೀ. ಆನೆ ನಿರೋಧಕ ಕಂದಕವನ್ನು ನಿರ್ಮಿಸಲಾಗಿದೆ. ಇದಲ್ಲದೆ, ಈ ಭಾಗದಲ್ಲಿ 8.00 ಕಿ.ಮೀ.ಗಳಷ್ಟು ಸೋಲಾರ್ ತಂತಿ ಬೇಲಿಯ ನಿರ್ಮಾಣ, 10.00 ಕಿ.ಮೀ. ಟೆಂಟಿಕಲ್ ಫೆನ್ಸಿಂಗ್ ಹಾಗೂ ಆನೆ ನಿರೋಧಕ ಕಂದಕ ನಿರ್ಮಿಸಲು ಸಾಧ್ಯವಾಗದ ಪ್ರದೇಶದಲ್ಲಿ 63 ಆರ್.ಸಿ.ಸಿ. ಪಿಲ್ಲರ್‌ಗಳನ್ನು ನಿರ್ಮಿಸಲಾಗಿದೆ.<br>3. ಮೂಡಿಗೆರೆ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಆನೆಗಳು ಜನವಸತಿ ಪ್ರದೇಶಕ್ಕೆ ಬರದಂತೆ ಹಾಗೂ ಜನವಸತಿ ಪ್ರದೇಶಕ್ಕೆ ಬಂದಾಗ, ಇವುಗಳನ್ನು ಕಾಡಿಗೆ ಹಿಮ್ಮೆಟ್ಟಿಸಲು ಪ್ರಸಕ್ತ ಸಾಲಿನಲ್ಲಿ ಒಟ್ಟು 10 ಆನೆ ಹಿಮ್ಮೆಟ್ಟಿಸುವ ತಂಡಗಳನ್ನು ರಚಿಸಿ ಕಾರ್ಯ ನಿರ್ವಹಿಸಲಾಗಿದೆ. |

| | | |
|---|---|---|
| | | 4. ಕಾಡಾನೆಗಳ ಹಾವಳಿಯಿಂದ ಉಂಟಾಗುವ ಬೆಳೆಹಾನಿ ಪ್ರಕರಣಗಳಿಗೆ ಕಳೆದ ಮೂರು ವರ್ಷಗಳಲ್ಲಿ ಮೂಡಿಗೆರೆ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಪಾವತಿಸಿದ ಪರಿಹಾರ (Ex-gratia) ವಿವರ ಈ ಕೆಳಗಿನಂತಿದೆ.<br><br>(table below)<br><br>5. ಪ್ರಸಕ್ತ ಸಾಲಿನಲ್ಲಿ 50:50 ಅನುಪಾತದಲ್ಲಿ 3398 ಮೀ. ಸೋಲಾರ್ ಫೆನ್ಸಿಂಗ್‌ನ್ನು ರೈತರ ಬೇಡಿಕೆ ಅನುಸಾರ ಮುತ್ತೋಡಿ ವಲಯದಲ್ಲಿ ನಿರ್ಮಿಸಲಾಗಿದೆ. |
| ಇ) | ಈ ಭಾಗದಿಂದ ಆನೆಗಳನ್ನು ಸ್ಥಳಾಂತರ ಮಾಡುವ ಯೋಜನೆ ಸರ್ಕಾರದ ಮುಂದಿದೆಯೇ?<br>(ಸಂಪೂರ್ಣ ವಿವರ ನೀಡುವುದು) | ಚಿಕ್ಕಮಗಳೂರು ವಿಭಾಗ ವ್ಯಾಪ್ತಿಯಲ್ಲಿ ಕಾಡಾನೆಯನ್ನು ಸ್ಥಳಾಂತರಿಸುವ ಬಗ್ಗೆ ಯಾವುದೇ ಯೋಜನೆ ಸರ್ಕಾರದ ಮುಂದೆ ಇರುವುದಿಲ್ಲ. |

| ಕ್ರ. ಸಂ. | ವರ್ಷ | ಪರಿಹಾರ ವಿವರ | |
|---|---|---|---|
| | | ಪ್ರಕರಣಗಳ ಸಂಖ್ಯೆ | ಪಾವತಿಸಿದ ಪರಿಹಾರ (ರೂ.) |
| 1. | 2017-18 | 641 | 61,13,502.00 |
| 2. | 2018-19 | 656 | 51,99,701.00 |
| 3. | 2019-20 | 565 | 57,53,335.00 |
| 4. | 2020-21 (ನವೆಂಬರ್-2020ರ ಅಂತ್ಯಕ್ಕೆ | 224 | 22,96,009.00 |

ಸಂಖ್ಯೆ: ಅಪಜೀ 207 ಎಫ್ ಡಬ್ಲ್ಯೂ ಎಲ್ 2020

(ಆನಂದ್ ಸಿಂಗ್)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

# ಕರ್ನಾಟಕ ವಿಧಾನ ಸಭೆ

(12)

| | |
|---|---|
| **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:** | **764** |
| **ಸದಸ್ಯರ ಹೆಸರು:** | **ಶ್ರೀ ಯತೀಂದ್ರ ಸಿದ್ದರಾಮಯ್ಯ ಡಾ\|\| (ವರುಣ)** |
| **ಉತ್ತರಿಸಬೇಕಾದ ದಿನಾಂಕ:** | **10-12-2020** |
| **ಉತ್ತರಿಸಬೇಕಾದ ಸಚಿವರು:** | **ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು** |

| ಪ್ರಶ್ನೆ | ಉತ್ತರ |
|---|---|
| **ಅ)** ಪ್ರಸ್ತುತ ರಾಜ್ಯದಲ್ಲಿ ಕೋವಿಡ್-19ರ ಕಾರಣದಿಂದ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳು ಪ್ರಾರಂಭವಾಗಿಲ್ಲದಿದ್ದರೂ ಸಹ ಕೆಲವು ಶಾಲೆಗಳಲ್ಲಿ ಆನ್‌ಲೈನ್ ಮೂಲಕ ಶಿಕ್ಷಣ ನಡೆಸುವುದುದಾಗಿ ತಿಳಿಸಿ ಪೂರ್ಣ ಶುಲ್ಕವನ್ನು ವಸೂಲಿ ಮಾಡಲು ಕ್ರಮ ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಖಾಸಗಿ ಶಾಲೆಗಳು ಆನ್‌ಲೈನ್ ವಿದ್ಯಾರ್ಥಿಗಳಿಗೆ ಭೋದನೆ, ಪಾಠಪ್ರವಚನ, ನಡೆಸುತಿದ್ದು, ಈ ಸಂಬಂಧ ಅಗತ್ಯ ಶುಲ್ಕ ಪಾವತಿಸುವಂತೆ ವಿದ್ಯಾರ್ಥಿಗಳಿಗೆ ಮತ್ತು ಪೋಷಕರಿಗೆ ಇ-ಮೇಲ್ ಮತ್ತು ಎಸ್.ಎಂ.ಎಸ್ ಮೂಲಕ ಸೂಚಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| **ಆ)** ಬಂದಿದ್ದಲ್ಲಿ, ಅಂತಹ ಶಾಲೆಗಳ ವಿರುದ್ಧ ಸರ್ಕಾರ ಯಾವ ಕ್ರಮ ತೆಗೆದುಕೊಂಡಿದೆ? (ವಿವರ ನೀಡುವುದು) | ಕೋವಿಡ್-19ರ ಹಿನ್ನಲೆಯಲ್ಲಿ ರಾಜ್ಯದಲ್ಲಿನ ಖಾಸಗಿ ಶಾಲೆಗಳಲ್ಲಿ 2020-21ನೇ ಸಾಲಿಗೆ ಸಂಬಂಧಿಸಿದಂತೆ, ಮಕ್ಕಳ ಪೋಷಕರಿಂದ ಪಡೆಯುವಂತಹ ಶುಲ್ಕಗಳಿಗೆ ಸಂಬಂಧಿಸಿದಂತೆ ಆಯುಕ್ತರ ಕಛೇರಿ ಸುತ್ತೋಲೆ ದಿನಾಂಕ:28/04/2020ರಲ್ಲಿ ಶುಲ್ಕವನ್ನು ಪಾವತಿಸಲು ಶಕ್ತರಿರುವ ಪೋಷಕರು ಶಾಲಾ ಶುಲ್ಕವನ್ನು ಪಾವತಿಸಲು ಅನುಮತಿ ನೀಡಲಾಗಿದೆ,<br><br>ಸರ್ಕಾರದ ಸುತ್ತೋಲೆ ಸಂಖ್ಯೆ: ಇಡಿ 76 ಪಿಜಿಸಿ 2020, ದಿನಾಂಕ:19-06-2020ರಲ್ಲಿ ಕರ್ನಾಟಕ ಶಿಕ್ಷಣ ನಿಯಮ 1999ರಲ್ಲಿ ಕಲ್ಪಿಸಿರುವ ಅವಕಾಶವನ್ನು ಸಾರ್ವಜನಿಕರು ಆರ್ಥಿಕ ಸಂಕಷ್ಟಕ್ಕೆ ಒಳಗಾಗಿರುವುದನ್ನು ಸರ್ಕಾರವು ಪರಿಗಣಿಸಿ ಕರ್ನಾಟಕ ಶಿಕ್ಷಣ ಕಾಯ್ದೆ 1983ಸೆಕ್ಷನ್ 133 ಉಪ ನಿಯಮ (2)ರಡಿಯಲ್ಲಿನ ಅಧಿಕಾರವನ್ನು ಚಲಾಯಿಸಿ ಎಲ್ಲಾ ಖಾಸಗಿ ಅನುದಾನ ರಹಿತ ಶಾಲೆಗಳು 2020-21ನೇ ಶೈಕ್ಷಣಿಕ ಸಾಲಿನಲ್ಲಿ ಯಾವುದೇ ಬೋಧನಾ ಶುಲ್ಕವನ್ನು ಹೆಚ್ಚಿಸಬಾರದೆಂದು ಸೂಚಿಸಿದೆ.<br><br>ಆನ್‌ಲೈನ್ ಶಿಕ್ಷಣದ ವಿಷಯವಾಗಿ ಕರ್ನಾಟಕ ರಾಜ್ಯ ಉಚ್ಚ ನ್ಯಾಯಾಲಯದ ಆದೇಶದ ಹಿನ್ನಲೆಯಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ಮಾರ್ಗದರ್ಶಿ 'ಪ್ರಗ್ಯಾತಾ'ಅನ್ನು ಅನುಸರಿಸುವ ಕುರಿತು ಸರ್ಕಾರದ ಆದೇಶ ಸಂಖ್ಯೆ: ಇಪಿ 139 ಪಿಜಿಸಿ 2020, ದಿನಾಂಕ:27.06.2020ರಲ್ಲಿ ಸೂಚನೆಗಳನ್ನು ಹೊರಡಿಸಿದ್ದು, ಕೋವಿಡ್-19ರ ಹಿನ್ನಲೆಯಲ್ಲಿ ನಿಯಮಿತ ಶಿಕ್ಷಣಕ್ಕೆ ಪೂರಕವಾಗಿ ಆನ್‌ಲೈನ್ ಶಿಕ್ಷಣ ಒದಗಿಸಬೇಕಾಗಿ ಬಂದಿರುವುದರಿಂದ, ಆನ್ ಲೈನ್ ಶಿಕ್ಷಣಕ್ಕಾಗಿ ಯಾವುದೇ ಹೆಚ್ಚುವರಿ ಶುಲ್ಕ ವಿಧಿಸಬಾರದಾಗಿ ತಿಳಿಸಿದೆ. ಇದಕ್ಕಾಗಿ ತಗಲುವ ವೆಚ್ಚವನ್ನು ನಿಯಮಿತ |

| | |
|---|---|
| | ವಾರ್ಷಿಕ ಬೋಧನಾ ಶುಲ್ಕದಿಂದಲೇ ಭರಿಸತಕ್ಕದೆಂದು ಆದೇಶಿಸಿದೆ. (ಪ್ರತಿ-ಅನುಬಂಧದಲ್ಲಿರಿಸಿದೆ)<br><br>ಮುಂದುವರೆದು, ಆಯುಕ್ತರು, ಸಾ.ಶಿ.ಇ ಬೆಂಗಳೂರು ಇವರ ಸುತ್ತೋಲೆ ಸಂಖ್ಯೆ: ಸಿ7(2)ಪ್ರಾಶಿಅ.ಶುಲ್ಕ.30:2020-21, ದಿನಾಂಕ:05-09-2020ರಲ್ಲಿ ಖಾಸಗಿ ಅನುದಾನ ರಹಿತ ಶಾಲೆಗಳು ಮೊದಲನೇ ಕಂತಿನ ಅಧಿಕೃತ ಶುಲ್ಕವನ್ನು ಮಾತ್ರ ದಾಖಲಾತಿಗಾಗಿ ಪೋಷಕರಿಂದ ಪಡೆಯಲು ಅನುಮತಿ ನೀಡಲಾಗಿದೆ. ಆದರೆ, ಯಾವುದೇ ಕಾರಣಕ್ಕೂ ಕಳೆದ ವರ್ಷ ಪಡೆದ ಶುಲ್ಕಕ್ಕಿಂತ ಪ್ರಸ್ತುತ ವರ್ಷದ ಶುಲ್ಕವನ್ನು ಹೆಚ್ಚಿಸದಂತೆ ಸೂಚಿಸಿದೆ.<br><br>ಬಲವಂತವಾಗಿ ಶುಲ್ಕವನ್ನು ಪಾವತಿಸಲು ಸೂಚಿಸಿದಂತಹ ಶಾಲೆಗಳಿಗೆ ಜಿಲ್ಲಾ ಉಪನಿರ್ದೇಶಕರು ತಮ್ಮ ಹಂತದಲ್ಲಿ ಪರಿಶೀಲನಾ ತಂಡವನ್ನು ರಚಿಸಿ ದೂರು ದಾಖಲಿಸಿದ ಶಾಲೆಗೆ ತಕ್ಷಣ ಭೇಟಿ ನೀಡಿ ಕ್ರಮವಹಿಸಲು ತಿಳಿಸಲಾಗಿದೆ.<br><br>ಖಾಸಗಿ ಶಾಲೆಗಳು ಶುಲ್ಕದ ಬಗ್ಗೆ ದಾವೆ ಹೂಡಿದ್ದು, ಮಾನ್ಯ ಉಚ್ಛ ನ್ಯಾಯಾಲಯವು ಮಧ್ಯಂತರ ಆದೇಶ ನೀಡಿ ಯಾವುದೇ ಶಾಲೆಯ ವಿರುದ್ಧ ಒತ್ತಡ ಹೇರುವಂತಹ ಅಥವಾ ಬಲವಂತದ ಕ್ರಮಗಳನ್ನು ಕೈಗೊಳ್ಳಬಾರದೆಂದು ಆದೇಶಿಸಿದೆ. |

**ಇಡಿ 155 ಪಿಜಿಸಿ 2020**

[ ಎಸ್.ಸುರೇಶ್ ಕುಮಾರ್]

**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.**

12

# ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ** : ರಾಜ್ಯದಲ್ಲಿ ಎಲ್.ಕೆ.ಜಿ, ಯು.ಕೆ.ಜಿ ಮತ್ತು 1 ರಿಂದ 10ನೇ ತರಗತಿಯ ವಿದ್ಯಾರ್ಥಿಗಳಿಗೆ ಆನ್‌ಲೈನ್/ಆಫ್‌ಲೈನ್ ತರಗತಿಗಳನ್ನು ನಡೆಸಲು ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ** : 1) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ರವರ ದಿನಾಂಕ:02.06.2020ರಂದು ನಡೆದ ಸಭೆಯ ನಡವಳಿ.

2) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ರವರ ಟಿಪ್ಪಣಿ ಸಂಖ್ಯೆ: ಪ್ರಾ.ಪ್ರೌ.ಸ.ಸ/4841/2019-20, ದಿನಾಂಕ:11.06.2020.

3) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ಏಕ ಕಡತ ಸಂಖ್ಯೆ: CPIBM-49-EV-2020

---

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಸಭಾ ನಡವಳಿಯಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರು ದಿನಾಂಕ:02.06.2020ರಂದು ವಿವಿಧ ಸಂಘ ಸಂಸ್ಥೆಗಳು, ಶಾಲಾ ಆಡಳಿತ ಮಂಡಳಿಗಳು ಮತ್ತು ಶಿಕ್ಷಣ ತಜ್ಞರೊಂದಿಗೆ ಸಭೆಯನ್ನು ನಡೆಸಿ, ಸುಧೀರ್ಘವಾಗಿ ಚರ್ಚಿಸಿ ಪೂರ್ವ ಪ್ರಾಥಮಿಕ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಪಡೆಯುವ ವಿದ್ಯಾರ್ಥಿಗಳ ಸಂಬಂಧದಲ್ಲಿ ಶಿಕ್ಷಣವನ್ನು ಒದಗಿಸುವ ನಿಟ್ಟಿನಲ್ಲಿ, ವಯೋಮಾನಕ್ಕನುಗುಣವಾಗಿ ವಿದ್ಯಾರ್ಥಿಗಳನ್ನು ಕಲಿಕಾ ಪ್ರಕ್ರಿಯೆಯಲ್ಲಿ ತೊಡಗಿಸಿಕೊಳ್ಳಲು ಆನ್ ಲೈನ್ ಮೂಲಕ ತರಗತಿಗಳನ್ನು ನಡೆಸುವ ಬಗ್ಗೆ ನಿರ್ಣಯಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ(2)ರ ಟಿಪ್ಪಣಿಯಲ್ಲಿ ಕೋವಿಡ್-19 ವೈರಸ್ ಸೋಂಕು ರಾಜ್ಯದಲ್ಲಿ ಹರಡುತ್ತಿರುವ ಹಿನ್ನಲೆಯಲ್ಲಿ 2020-21ನೇ ಸಾಲಿಗೆ ಶಾಲೆಗಳು ಪ್ರಾರಂಭವಾಗದಿರುವ ಹಿನ್ನಲೆಯಲ್ಲಿ, ಮಕ್ಕಳು ಕಲಿಕೆಯ ಅವಕಾಶಗಳಿಂದ ವಂಚಿತರಾಗದಂತೆ ಹಾಗೂ ಈ ಸನ್ನಿವೇಶದಲ್ಲಿ ವಯೋಮಾನಕ್ಕನುಗುಣವಾಗಿ ಮತ್ತು ಸರ್ಕಾರದ ನೀತಿಗೆ ಅನುಸಾರವಾಗಿ ಶಿಕ್ಷಣ ವನ್ನು ನೀಡಲು ಕೆಲವು ಮಾರ್ಗೋಪಾಯಗಳನ್ನು ಸೂಚಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ(3)ರ ಏಕ ಕಡತದಲ್ಲಿ ಮಾನ್ಯ ಶಿಕ್ಷಣ ಸಚಿವರ ದಿನಾಂಕ:11.06.2020ರ ಟಿಪ್ಪಣಿ ಹಾಗೂ ದಿನಾಂಕ:02.06.2020ರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರ ನಡವಳಿಯನ್ವಯ ಪರಿಶೀಲಿಸಿ, ಕಿರಿಯ ವಯಸ್ಸಿನ ವಿದ್ಯಾರ್ಥಿಗಳಿಗೆ ಆನ್ ಲೈನ್ ತರಗತಿಗಳನ್ನು ನಡೆಸುವ ಬಗ್ಗೆ ನಿಮ್ಹಾನ್ಸ್ ಸಂಸ್ಥೆಯಿಂದ ಸಾದಕ ಬಾದಕಗಳ ಬಗ್ಗೆ ಅಭಿಪ್ರಾಯ ಪಡೆದು, ರಾಜ್ಯದಲ್ಲಿನ ರಾಜ್ಯ ಪಠ್ಯಕ್ರಮ ಹಾಗೂ ಇನ್ನಿತರೆ ಪಠ್ಯಕ್ರಮಗಳಾದ ಐ.ಸಿ.ಎಸ್.ಇ/ಸಿ.ಬಿ.ಎಸ್.ಇ/ಅಂತರಾಷ್ಟ್ರೀಯ ಪಠ್ಯಕ್ರಮ ಸೇರಿದಂತೆ ಎಲ್ಲಾ ಶಾಲೆಗಳು ಎಲ್.ಕೆ.ಜಿ ಯಿಂದ 5ನೇ ತರಗತಿಯವರೆಗೆ ಆನ್ ಲೈನ್ ಬೋಧನೆಯನ್ನು ಮಾಡುವುದು ಸೂಕ್ತವಲ್ಲವೆಂದು ಹಾಗೂ ಒಂದು ವೇಳೆ ಈಗಾಗಲೇ ಆನ್ ಲೈನ್ ತರಗತಿಗಳನ್ನು ಪ್ರಾರಂಭಿಸಿದಲ್ಲಿ ತಕ್ಷಣದಿಂದ ಸ್ಥಗಿತಗೊಳಿಸಲು ಮತ್ತು 6-10ನೇ ತರಗತಿಯವರೆಗೆ ಆನ್ ಲೈನ್ ಶಿಕ್ಷಣವನ್ನು ವಯೋಮಾನಕ್ಕನುಗುಣವಾಗಿ, ವೈಜ್ಞಾನಿಕವಾಗಿ ಅಳವಡಿಸಿಕೊಳ್ಳಲು ಈ ಸಂಬಂಧ ಮಾರ್ಗಸೂಚಿಗಳನ್ನು ಸಿದ್ಧಪಡಿಸಲು ವಿವಿಧ ತಜ್ಞರು ಹಾಗೂ ಅಧಿಕಾರಿಗಳನ್ನೊಳಗೊಂಡ ಒಂದು ಸಮಿತಿಯನ್ನು ರಚಿಸಿ, ಅದರ ಶಿಫಾರಸ್ಸುಗಳನ್ನು ಪಡೆದು, ಪರಿಶೀಲಿಸುವುದು ಸೂಕ್ತವೆಂದು ಪ್ರಸ್ತಾಪಿಸಿ, ಈ ಸಂಬಂಧ ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯಲ್ಲಿ ಒದಗಿಬಂದ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಮಕ್ಕಳ ವಯೋಮಾನಕ್ಕನುಗುಣವಾಗಿ ಮತ್ತು ಮಕ್ಕಳು ಕಲಿಕೆಯ ಅವಕಾಶದಿಂದ ವಂಚಿತರಾಗದಂತೆ ಹಾಗೂ ಮಕ್ಕಳ ಆಯಾ ವಯೋಮಾನಕ್ಕನುಗುಣವಾಗಿ ನಿಗದಿತ ಸ್ಕ್ರೀನ್ ಸಮಯದಲ್ಲಿ ಮಾತ್ರ ತಂತ್ರಜ್ಞಾನ ಸಾಧನಗಳನ್ನು ಬಳಸುವಂತೆ ಪ್ರೇರಪಿಸಲು ಅನುಕೂಲವಾಗುವಂತೆ ಹಾಗೂ ವಿದ್ಯಾರ್ಥಿಗಳು ಮೊಬೈಲ್/ಲ್ಯಾಪ್ ಟಾಪ್ ಹಾಗೂ ವಿವಿಧ ತಂತ್ರಜ್ಞಾನ ಪರಿಕರಗಳಿಗೆ ವ್ಯಸನವಾಗದಂತೆ ಎಚ್ಚರಿಕೆ ವಹಿಸಿ ಎಲ್ಲಾ ಶಾಲೆಗಳ ಎಲ್.ಕೆ.ಜಿ ಯಿಂದ 5ನೇ ತರತಗತಿಯವರೆಗೆ ಆನ್ ಲೈನ್ ಬೋಧನೆಯನ್ನು ಸ್ಥಗಿತಗೊಳಿಸಲು ಹಾಗೂ 6-10ನೇ ತರಗತಿಯವರೆಗೆ ಆನ್ ಲೈನ್ ಶಿಕ್ಷಣವನ್ನು ವಯೋಮಾನಕ್ಕನುಗುಣವಾಗಿ ವೈಜ್ಞಾನಿಕವಾಗಿ ಅಳವಡಿಸಿಕೊಳ್ಳಲು ಈ ಸಂಬಂದ ಮಾರ್ಗಸೂಚಿಗಳನ್ನು ಸಿದ್ಧಪಡಿಸಲು ಒಂದು ಸಮಿತಿಯನ್ನು ರಚಿಸಲು ಹಾಗೂ ಆನ್ ಲೈನ್ ಬೋಧನೆಯ ಹೆಸರಿನಲ್ಲಿ ಯಾವುದೇ ಶುಲ್ಕವನ್ನು ವಸೂಲಾತಿ ಮಾಡದಿರುವಂತೆ ಎಲ್ಲಾ ಶಿಕ್ಷಣ ಸಂಸ್ಥೆಗಳಿಗೆ ನಿರ್ದೇಶನ ನೀಡಲು ಸರ್ಕಾರವು ನಿರ್ಣಯಿಸಿದೆ ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ : ಇಪಿ 139 ಪಿಜಿಸಿ 2020, ಬೆಂಗಳೂರು ದಿನಾಂಕ :15-06-2020**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಶಿಕ್ಷಣ ಕಾಯ್ದೆ 1983ರ ಸೆಕ್ಷನ್ (7)ರಡಿಯಲ್ಲಿ ಅಧಿಕಾರ ಪ್ರತ್ಯಾಯೋಜಿಸಿ, ರಾಜ್ಯದಲ್ಲಿನ ರಾಜ್ಯ ಪಠ್ಯಕ್ರಮ ಹಾಗೂ ಇನ್ನಿತರೇ ಪಠ್ಯಕ್ರಮಗಳಾದ ಐಸಿಎಸ್‌ಇ/ಸಿಬಿಎಸ್‌ಇ/ಅಂತರಾಷ್ಟ್ರೀಯ ಪಠ್ಯಕ್ರಮ ಸೇರಿದಂತೆ ಎಲ್ಲಾ ಶಾಲೆಗಳು ಎಲ್‌ಕೆಜಿ ಯಿಂದ 05ನೇ ತರಗತಿಯವರೆಗೆ ಆನ್‌ಲೈನ್ /ಆಫ್ ಲೈನ್ ಬೋಧನೆಯನ್ನು ಸರ್ಕಾರದ ಮಾರ್ಗಸೂಚಿಗಳು ಬರುವವರೆಗು ಮಾಡತಕ್ಕದ್ದಲ್ಲ. ಅಂತೆಯೇ ಎಲ್.ಕೆ.ಜಿ ಯಿಂದ 05ನೇ ತರಗತಿಯವರೆಗೆ ಆನ್‌ಲೈನ್ /ಆಫ್ ಲೈನ್ ಹೊರತುಪಡಿಸಿ ಸಮೂಹ ಮಾಧ್ಯಮಗಳು, ತಂತ್ರಜ್ಞಾನ ಆಧಾರಿತವಾದ ಬೋಧನೆಯನ್ನು ಅಳವಡಿಸಿಕೊಳ್ಳುವ ಕುರಿತಂತೆ ಮಾರ್ಗಸೂಚಿಗಳು ರಚನೆಯಾಗಬೇಕಿರುವುದರಿಂದ, ಈಗಾಗಲೇ ಒಂದು ವೇಳೆ ಆನ್‌ಲೈನ್ ತರಗತಿಗಳನ್ನು ಪ್ರಾರಂಭಿಸಿದ್ದಲ್ಲಿ ತಕ್ಷಣದಿಂದಲೇ ಸ್ಥಗಿತಗೊಳಿಸಲು ಹಾಗೂ ಆನ್ ಲೈನ್ ಬೋಧನೆಯ ಹೆಸರಿನಲ್ಲಿ ಯಾವುದೇ ಶುಲ್ಕವನ್ನು ವಸೂಲಾತಿ ಮಾಡದಂತೆ ಎಲ್ಲಾ ಸರ್ಕಾರಿ/ಅನುದಾನಿತ/ಅನುದಾನರಹಿತ ಶಿಕ್ಷಣ ಸಂಸ್ಥೆಗಳಿಗೆ ಆದೇಶಿಸಿದೆ.

ಮುಂದುವರೆದು, 06 ರಿಂದ 10ನೇ ತರಗತಿಯವರೆಗೆ ಆನ್‌ಲೈನ್ ಶಿಕ್ಷಣವನ್ನು ವಯೋಮಾನಕ್ಕೆ ಅನುಗುಣವಾಗಿ, ವೈಜ್ಞಾನಿಕವಾಗಿ ಅಳವಡಿಸಿಕೊಳ್ಳಲು ಈ ಸಂಬಂಧ ಮಾರ್ಗಸೂಚಿಗಳನ್ನು ಸಿದ್ಧಪಡಿಸಲು ಈ ಕೆಳಕಂಡ ಸಮಿತಿಯನ್ನು ರಚಿಸಲಾಗಿದೆ :

| ಕ್ರಮ ಸಂಖ್ಯೆ | ಹೆಸರು ಮತ್ತು ಪದನಾಮ/ಪ್ರಾಧಿಕಾರ | ಪದನಾಮ |
|---|---|---|
| 1 | ಡಾ \|\| ಎಂ.ಕೆ. ಶ್ರೀಧರ್, ರಾಷ್ಟ್ರೀಯ ಶಿಕ್ಷಣ ನೀತಿ ನಿರೂಪಣಾ ಸಮಿತಿಯ ಸದಸ್ಯ ಕಾರ್ಯದರ್ಶಿ ಹಾಗೂ ಶಿಕ್ಷಣ ತಜ್ಞರು | ಅಧ್ಯಕ್ಷರು |
| 2 | ಡಾ\|\| ಗುರುರಾಜ್ ಕರ್ಜಗಿ, ಶಿಕ್ಷಣ ತಜ್ಞರು | ಸದಸ್ಯರು |
| 3 | ಡಾ\|\| ವಿ.ಪಿ. ನಿರಂಜನಾರಾಧ್ಯ, ಶಿಕ್ಷಣ ತಜ್ಞರು ಹಾಗೂ ಮುಖ್ಯಸ್ಥರು, ಮಗು ಮತ್ತು ಕಾನೂನು ಕೇಂದ್ರ, ರಾಷ್ಟ್ರೀಯ ಕಾನೂನು ಶಾಲೆ | ಸದಸ್ಯರು |

| | | |
|---|---|---|
| 4. | ಶ್ರೀ. ಹೃಷಿಕೇಶ್,<br>ಅಜೀಮ್ ಪ್ರೇಮ್ ಜಿ ಫೌಂಡೇಷನ್ | ಸದಸ್ಯರು |
| 5. | ನಿಮ್ಹಾನ್ಸ್ ಸಂಸ್ಥೆಯ ಮುಖ್ಯಸ್ಥರು ಹಾಗೂ ಆ ಸಂಸ್ಥೆಯ ಮಕ್ಕಳ ಮಾನಸಿಕ ತಜ್ಞರು | ಸದಸ್ಯರು |
| 6. | ಅರ್ಲಿ ಚೈಲ್ಡ್ ಹುಡ್ ಸಂಘಟನೆಯ ಪ್ರತಿನಿಧಿಗಳು | ಸದಸ್ಯರು |
| 7. | ರಾಜ್ಯ / ಐಸಿಎಸ್‌ಇ / ಸಿಬಿಎಸ್‌ಇ / ಅಂತರಾಷ್ಟ್ರೀಯ ಪಠ್ಯಕ್ರಮವನ್ನು ಬೋಧಿಸುವ ಖಾಸಗಿ ಶಾಲಾ ಆಡಳಿತ ಮಂಡಳಿಗಳ ಸಂಘಟನೆಗಳ ಪ್ರತಿನಿಧಿಗಳು ಹಾಗೂ ಪೋಷಕರು / ವಿದ್ಯಾರ್ಥಿಗಳ ಪ್ರತಿನಿಧಿಗಳು | ಸದಸ್ಯರು |
| 8. | ಡಾ|| ಕೆ.ಜಿ. ಜಗದೀಶ್,<br>ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ | ಸದಸ್ಯರು |
| 9. | ಶ್ರೀ. ಗೋಪಾಲಕೃಷ್ಣ,<br>ನಿರ್ದೇಶಕರು (ಗುಣಮಟ್ಟ), ಸಮಗ್ರ ಶಿಕ್ಷಣ – ಕರ್ನಾಟಕ | ಸದಸ್ಯರು |
| 10 | ಎಂ.ಆರ್. ಮಾರುತಿ,<br>ನಿರ್ದೇಶಕರು, ಡಿ.ಎಸ್.ಇ.ಆರ್.ಟಿ | ಸದಸ್ಯರು |
| 11. | ಡಾ|| ಎಂ.ಟಿ. ರೇಜು, ಭಾ.ಆ.ಸೇ.,<br>ರಾಜ್ಯ ಯೋಜನಾ ನಿರ್ದೇಶಕರು, ಸಮಗ್ರ ಶಿಕ್ಷಣ ಕರ್ನಾಟಕ - ಸದಸ್ಯ ಕಾರ್ಯದರ್ಶಿ | ಸದಸ್ಯ ಕಾರ್ಯದರ್ಶಿ |

**ಸಮಿತಿಯ ಜವಾಬ್ದಾರಿಗಳು:**

- 6 ರಿಂದ 10ನೇ ತರಗತಿಯವರೆಗೆ ಆನ್‌ಲೈನ್ ಶಿಕ್ಷಣವನ್ನು ವಯೋಮಾನಕ್ಕೆ ಅನುಗುಣವಾಗಿ, ವೈಜ್ಞಾನಿಕವಾಗಿ ಅಳವಡಿಸಿಕೊಳ್ಳುವಲ್ಲಿ ಮಾರ್ಗಸೂಚಿಗಳನ್ನು ರಚಿಸುವುದು.
- ಎಲ್.ಕೆ.ಜಿ ಯಿಂದ 05ನೇ ತರಗತಿಯವರೆಗೆ ಆನ್‌ಲೈನ್ ಹೊರತುಪಡಿಸಿ ಸಮೂಹ ಮಾಧ್ಯಮಗಳು, ತಂತ್ರಜ್ಞಾನಾಧಾರಿತವಾದ ಬೋಧನೆಯನ್ನು ಅಳವಡಿಸಿಕೊಳ್ಳುವ ಕುರಿತಂತೆ ಮಾರ್ಗಸೂಚಿಗಳನ್ನು ರಚಿಸುವುದು.
- ಶಿಕ್ಷಣದಲ್ಲಿ ತಂತ್ರಜ್ಞಾನವನ್ನು ಯಾವ ರೀತಿ ಬಳಸಬೇಕು, ಸಾಂಪ್ರದಾಯಕ ತರಗತಿಗಳಿಗೆ ಪರ್ಯಾಯ ಎನ್ನುವ ಭಾವನೆ ಮೂಡದಂತೆ ಮಕ್ಕಳ ಕಲಿಕೆಗೆ ಪ್ರೇರೇಪಣೆ ಹಾಗೂ ಮಕ್ಕಳ ಜ್ಞಾನಾರ್ಜನೆಗೆ ಪೂರಕವಾಗಿ ತಂತ್ರಜ್ಞಾನ ಬಳಕೆ ಹೇಗಿರಬೇಕು. ವಯೋಮಾನಕ್ಕನುಗುಣವಾಗಿ ವಿದ್ಯಾರ್ಥಿಯ ಏಕಾಗ್ರತಾ ಸಾಮರ್ಥ್ಯ, ತಂತ್ರಜ್ಞಾನ ಉಪಕರಣಗಳ ಬಳಕೆಯಿಂದ ಉಂಟಾಗುವ ಆರೋಗ್ಯದ ಮೇಲಿನ ಪರಿಣಾಮಗಳು, ವಿಶೇಷವಾಗಿ ರಾಜ್ಯದ ನಗರ ಹಾಗೂ

ಗ್ರಾಮೀಣ ಪ್ರದೇಶಗಳ ವಿದ್ಯಾರ್ಥಿ/ಪೋಷಕರ ಸಾಮಾಜಿಕ ಸ್ಥಿತಿಗತಿಗಳ ಅಂತರದ ಹಿನ್ನೆಲೆಯಲ್ಲಿ ಈ ರೀತಿಯ ನೀತಿ ನಿರೂಪಣೆಗಳ ಕಾರಣ ಯಾವುದೇ ವಿದ್ಯಾರ್ಥಿಯು ಕಲಿಕೆಯಿಂದ ವಂಚಿತರಾಗದೆ ಮುಖ್ಯ ವಾಹಿನಿಯಲ್ಲಿ ಒಳಗೊಳ್ಳುವುದು ದೂರದರ್ಶನ ಹಾಗೂ ಸಮೂಹ ಮಾಧ್ಯಮಗಳ ಮುಖಾಂತರವಾದ ಬೋಧನೆ ಹಾಗೂ ಕಲಿಕಾ ಮಾನದಂಡಗಳ ಅನುಪಾಲನೆಯ ಅಂಶವೂ ಸೇರಿದಂತೆ ಈ ಕೋವಿಡ್ ಸಂದರ್ಭದಲ್ಲಿನ ಪರ್ಯಾಯ ಬೋಧನಾ ಕ್ರಮದ ಸಾಧಕ ಬಾಧಕಗಳನ್ನು ಚರ್ಚಿಸಿ, ಮಾರ್ಗಸೂಚಿಗಳನ್ನು ರಚಿಸುವುದು.

- ಈ ಸಮಿತಿಯು ಕೋವಿಡ್ 19 ಸಂದರ್ಭದಲ್ಲಿ ಮೇಲ್ಕಂಡಂತೆ ಅವಶ್ಯಕವಿರುವ ತುರ್ತು ತಂತ್ರಜ್ಞಾನಾಧಿರತವಾದ ಬೋಧನಾ ಕ್ರಮಗಳ ಕುರಿತಾದ ಸಲಹೆಯ ಜೊತೆಜೊತೆಗೆ ಮುಂದಿನ ದಿನಗಳಲ್ಲಿ ಈ ಮಾದರಿಯ ಬೋಧನೆಯನ್ನು ಶಿಕ್ಷಣ ವ್ಯವಸ್ಥೆಯಲ್ಲಿ ಅಳವಡಿಸಿಕೊಳ್ಳುವ ಸಂಬಂಧ ದೂರದರ್ಶಿತ್ವದ ಸಲಹಾತ್ಮಕ ಜವಾಬ್ದಾರಿಯನ್ನು ನಿರ್ವಹಿಸುವಲ್ಲಿ ಕೆಲಸ ಮಾಡುವ ವ್ಯವಸ್ಥೆಯನ್ನು ರೂಪಿಸುವುದು.
- ಸಮಿತಿಗೆ ಅಗತ್ಯವಾದ ಕೊಠಡಿ, ಅಗತ್ಯ ಪರಿಕರಗಳನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ರವರು ಒದಗಿಸತಕ್ಕದ್ದು.
- ಸಮಿತಿಯು ಕಡ್ಡಾಯವಾಗಿ 10 ದಿನಗಳೊಳಗಾಗಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.
- ಸಮಿತಿಯ ಸರ್ಕಾರೇತರ ಸದಸ್ಯರುಗಳಿಗೆ ಗೌರವ ಸಂಭಾವನೆ ನೀಡುವ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ವಿ.ಶರಣಬಸಪ್ಪ) 15/6/2020
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಪ್ರಾಥಮಿಕ)

ಇವರಿಗೆ:

1) ಮಹಾಲೇಖಪಾಲಕರು, ಎ & ಇ, ಬೆಂಗಳೂರು.
2) ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು - ಸಮಿತಿಗೆ ಸಂಬಂಧ ಪಟ್ಟ ಪ್ರಾಧಿಕಾರ/ಮಂಡಳಿಗಳಿಂದ ಮಾಹಿತಿ ಅಗತ್ಯವೆನಿಸಿದಲ್ಲಿ ನೇರವಾಗಿ ಸಮಿತಿಗೆ ಮಾಹಿತಿ ಒದಗಿಸುವಂತೆ ಕೋರಿದೆ.
3) ನಿರ್ದೇಶಕರು, ಸಮಗ್ರ ಶಿಕ್ಷಣ ಕರ್ನಾಟಕ, ಬೆಂಗಳೂರು
4) ಅಪರ ಆಯುಕ್ತರು, ಕಲಬುರಗಿ/ಧಾರವಾಡ.
5) ನಿರ್ದೇಶಕರು (ಪ್ರಾಥಮಿಕ/ಪ್ರೌಢ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು
6) ನಿರ್ದೇಶಕರು(ಗುಣಮಟ್ಟ), ಸಮಗ್ರ ಶಿಕ್ಷಣ-ಕರ್ನಾಟಕ, ಬೆಂಗಳೂರು.
7) ಸಮಿತಿ ಸದಸ್ಯರಿಗೆ-ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಮುಖಾಂತರ.
8) ಖಾಸಗಿ ಅನುದಾನಿತ/ಅನುದಾನರಹಿತ ಶಾಲಾ ಆಡಳಿತ ಮಂಡಳಿಗಳು/ಸಂಘ ಸಂಸ್ಥೆಗಳು- ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಮುಖಾಂತರ.
9) ಶಾಖಾ ರಕ್ಷಾಕಡತ

12

ಪ್ರತಿ:

1) ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
2) ಸರ್ಕಾರದ ಪ್ರಧಾನ ಕಾರ್ಯದರ್ಶಿರವರ ಆಪ್ತ ಕಾರ್ಯದರ್ಶಿ, ಶಿಕ್ಷಣ ಇಲಾಖೆ.
3) ಸರ್ಕಾರದ ಉಪ ಕಾರ್ಯದರ್ಶಿ (ಸೇವೆಗಳು), ಶಿಕ್ಷಣ ಇಲಾಖೆ, ಇವರ ಆಪ್ತ ಸಹಾಯಕರು.

ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 575
ಸದಸ್ಯರ ಹೆಸರು : ಶ್ರೀ ಶಿವಾನಂದ.ಎಸ್.ಪಾಟೀಲ್ (ಬಸವನ ಬಾಗೇವಾಡಿ)
ಉತ್ತರಿಸುವ ದಿನಾಂಕ : 10.12.2020
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬಸವನಬಾಗೇವಾಡಿ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜಿನಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ |
| ಆ) | ಹಾಗಿದ್ದಲ್ಲಿ, ಯಾವ ಯಾವ ಮೂಲಭೂತ ಸೌಕರ್ಯಗಳ ಬೇಡಿಕೆಯ ಪ್ರಸ್ತಾವನೆ ಸರ್ಕಾರದ ಮುಂದಿರುತ್ತದೆ; | ಸರ್ಕಾರಿ ಪಾಲಿಟೆಕ್ನಿಕ್, ಬಸವನಬಾಗೇವಾಡಿ ಸಂಸ್ಥೆಯನ್ನು ಪ್ರಾರಂಭಿಸಲು ಅಗತ್ಯವಿರುವ ಪೀಠೋಪಕರಣಗಳು, ಯಂತ್ರೋಪಕರಣಗಳು, ಪುಸ್ತಕಗಳು ಹಾಗೂ ಇತರೆ ಅತ್ಯಗತ್ಯ ಮೂಲಭೂತ ಸೌಕರ್ಯಗಳ ಬೇಡಿಕೆ ಸರ್ಕಾರದ ಮುಂದಿರುತ್ತದೆ. |
| ಇ) | ಮೂಲಭೂತ ಸೌಕರ್ಯಗಳನ್ನು ಕಲ್ಪಿಸದೇ ಇರುವುದಕ್ಕೆ ಕಾರಣಗಳೇನು; | ಸರ್ಕಾರಿ ಪಾಲಿಟೆಕ್ನಿಕ್, ಬಸವನಬಾಗೇವಾಡಿ ಸಂಸ್ಥೆಯನ್ನು 2020-21ನೇ ಸಾಲಿನಲ್ಲಿ ಕಾರ್ಯಾರಂಭ ಮಾಡಲು ಎಐಸಿಟಿಇ ಅನುಮೋದನೆ ನೀಡಿದ್ದು, ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ಅನುದಾನದ ಲಭ್ಯತೆಯನುಸಾರ ಹಂತ ಹಂತವಾಗಿ ಒದಗಿಸಲಾಗುತ್ತಿದೆ. |
| ಈ) | ಹಾಗಿದ್ದಲ್ಲಿ, ಮೂಲಭೂತ ಸೌಕರ್ಯಗಳನ್ನು ಒದಗಿಸಲು ಇದುವರೆಗೂ ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ಸರ್ಕಾರಿ ಪಾಲಿಟೆಕ್ನಿಕ್, ಬಸವನಬಾಗೇವಾಡಿ ಸಂಸ್ಥೆಯ ಮುಖ್ಯ ಕಟ್ಟಡ ನಿರ್ಮಾಣ ಕಾಮಗಾರಿಗೆ ನಬಾರ್ಡ್ ಆರ್‌ಐಡಿಎಫ್-21 ರಡಿ ರೂ.800.00 ಲಕ್ಷಗಳನ್ನು 2016-17ನೇ **ಸಾಲಿನಲ್ಲಿ** ಬಿಡುಗಡೆ ಮಾಡಿದ್ದು, 2019 ರಲ್ಲಿ ಕಾಮಗಾರಿ ಪೂರ್ಣಗೊಂಡಿರುತ್ತದೆ.<br><br>2017-18**ನೇ ಸಾಲಿನಲ್ಲಿ** ಎಸ್‌ಸಿಪಿ/ಟಿಎಸ್‌ಪಿ ಯೋಜನೆಯಡಿ ಹಾಸ್ಟೆಲ್ ಕಟ್ಟಡ ನಿರ್ಮಾಣ ಕಾಮಗಾರಿಗೆ ರೂ.281.00 ಲಕ್ಷಗಳನ್ನು ಬಿಡುಗಡೆ ಮಾಡಿದ್ದು, ಕಾಮಗಾರಿ ಪ್ರಗತಿಯಲ್ಲಿದೆ.<br><br>2018-19**ನೇ ಸಾಲಿನಲ್ಲಿ** ನಬಾರ್ಡ್ ಆರ್‌ಐಡಿಎಫ್-23 ರಡಿ ವರ್ಕ್‌ಷಾಪ್ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಅಂದಾಜು ಮೊತ್ತ ರೂ.296.00 ಲಕ್ಷಗಳಿಗೆ ನಿರ್ಮಾಣ ಮಾಡಲು ಮಂಜೂರು ಮಾಡಿದ್ದು, ಸದರಿ ಕಾಮಗಾರಿಗೆ ಈವರೆಗೂ ರೂ.197.50 ಲಕ್ಷಗಳನ್ನು ಬಿಡುಗಡೆಗೊಳಿಸಿದ್ದು, ಕಾಮಗಾರಿಯು ಪ್ರಗತಿಯಲ್ಲಿದೆ. ಇತರೆ ಅತ್ಯಗತ್ಯ ಮೂಲಭೂತ ಸೌಕರ್ಯಗಳನ್ನು ಅನುದಾನದ ಲಭ್ಯತೆಯನುಸಾರ ಹಂತ ಹಂತವಾಗಿ ಒದಗಿಸಲಾಗುತ್ತಿದೆ. |

ಸಂಖ್ಯೆ: ಇಡಿ 126 ಹೆಚ್‌ಪಿಟಿ 2020

(ಡಾ: ಅಶ್ವಥ್ ನಾರಾಯಣ ಸಿ.ಎನ್)
ಉಪ ಮುಖ್ಯಮಂತ್ರಿ ಹಾಗೂ
ಉನ್ನತ ಶಿಕ್ಷಣ ಸಚಿವರು

(14)

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 885
ಸದಸ್ಯರ ಹೆಸರು : ಶ್ರೀ ಹರೀಶ್ ಪೂಂಜ (ಬೆಳ್ತಂಗಡಿ)
ಉತ್ತರಿಸುವ ದಿನಾಂಕ : 10-12-2020
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಕರೋನಾ ಸಾಂಕ್ರಾಮಿಕ ಖಾಯಿಲೆಯು ವ್ಯಾಪಕವಾಗಿ ಹರಡಲು ಪ್ರಾರಂಭವಾದ ಹಿನ್ನೆಲೆಯಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜಿನ ಅತಿಥಿ ಉಪನ್ಯಾಸಕರುಗಳಿಗೆ ಮಾರ್ಚ್ ತಿಂಗಳಿನಿಂದ ಯಾವುದೇ ರೀತಿಯ ವೇತನವಾಗಲಿ, ಪರಿಹಾರ ಧನವಾಗಲಿ ನೀಡದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ<br><br>2019-20ನೇ ಸಾಲಿನಲ್ಲಿ ಸುಮಾರು 2819 ಅತಿಥಿ ಉಪನ್ಯಾಸಕರನ್ನು ವಿವಿಧ ಜಿಲ್ಲೆಗಳಲ್ಲಿ ನಿಯಮಾನುಸಾರ ನೇಮಕ ಮಾಡಲಾಗಿತ್ತು. ಸದರಿ ಅತಿಥಿ ಉಪನ್ಯಾಸಕರುಗಳಿಗೆ ನಿಯಮಾನುಸಾರ ಶೈಕ್ಷಣಿಕ ವರ್ಷದ ಅಂತ್ಯದವರೆಗೆ ರೂ.9000/- ಮಾಸಿಕ ಗೌರವಧನ ಪಾವತಿಸಲಾಗಿದೆ.<br><br>2020-21ನೇ ಶೈಕ್ಷಣಿಕ ಸಾಲಿನಲ್ಲಿ ಕೋವಿಡ್-19 ಸಾಂಕ್ರಮಿಕ ರೋಗದ ಹಿನ್ನೆಲೆಯಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳ ಪ್ರಥಮ ಮತ್ತು ದ್ವಿತೀಯ ಪಿಯುಸಿ ತರಗತಿಗಳು ಪ್ರಾರಂಭಗೊಳ್ಳದ ಕಾರಣ ಅತಿಥಿ ಉಪನ್ಯಾಸಕರನ್ನು ನೇಮಕ ಮಾಡಿಕೊಂಡಿರುವುದಿಲ್ಲ. ಅತಿಥಿ ಉಪನ್ಯಾಸಕರು ನೇಮಕವಾಗದ ಹಿನ್ನೆಲೆಯಲ್ಲಿ ಗೌರವಧನ ಪಾವತಿಯಾಗಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ಸದರಿ ಅತಿಥಿ ಉಪನ್ಯಾಸಕರುಗಳಿಗೆ ವೇತನ ಪಾವತಿ ಮಾಡುವ ಕುರಿತು ಸರ್ಕಾರವು ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ? (ಸಂಪೂರ್ಣ ವಿವರ ನೀಡುವುದು) | |

ಸಂಖ್ಯೆ: ಇಪಿ 173 ಡಿಜಿಡಬ್ಲ್ಯೂ 2020

(ಎಸ್.ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

15

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: | 811 |
| ವಿಧಾನಸಭೆಯ ಸದಸ್ಯರ ಹೆಸರು: | ಡಾ: ಅಜಯ್ ಧರ್ಮಸಿಂಗ್ (ಜೇವರ್ಗಿ) |
| ಉತ್ತರಿಸಬೇಕಾದ ದಿನಾಂಕ: | 10-12-2020 |
| ಉತ್ತರಿಸುವ ಸಚಿವರು: | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿರುವ ಖಾಸಗಿ ವೈದ್ಯಕೀಯ ಕಾಲೇಜುಗಳ ಸಂಖ್ಯೆ ಎಷ್ಟು (ವಿವರ ನೀಡುವುದು); | ರಾಜ್ಯದಲ್ಲಿರುವ ಖಾಸಗಿ ವೈದ್ಯಕೀಯ ಕಾಲೇಜುಗಳ ಸಂಖ್ಯೆ-42 ವಿವರವನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ. |
| ಆ. | ಕಳೆದ ಮೂರು ವರ್ಷಗಳಿಂದ ಸದರಿ ಕಾಲೇಜುಗಳು ದಂತ ಹಾಗೂ ಮೆಡಿಕಲ್ ಸೀಟುಗಳಿಗೆ ಎಷ್ಟು ಮೊತ್ತದ ಶುಲ್ಕವನ್ನು ನಿಗಧಿಪಡಿಸಿವೆ; ಆಡಳಿತ ಮಂಡಳಿಯ ಕೋಟಾ ಮತ್ತು ಸರ್ಕಾರಿ ಕೋಟಾದ ಸೀಟುಗಳ ಶುಲ್ಕದ ಮಾಹಿತಿ ನೀಡುವುದು; | ಕಳೆದ ಮೂರು ವರ್ಷಗಳ ಸ್ನಾತಕೋತ್ತರ ದಂತ ಹಾಗೂ ವೈದ್ಯಕೀಯ ಸೀಟುಗಳ ಶುಲ್ಕದ ವಿವರಗಳನ್ನು ಅನುಬಂಧ-2ರಲ್ಲಿ ಲಗತ್ತಿಸಿದೆ ಹಾಗೂ ಸ್ನಾತಕ ಕಾಲೇಜುಗಳ ದಂತ ಹಾಗೂ ವೈದ್ಯಕೀಯ ಸೀಟುಗಳ ಶುಲ್ಕದ ವಿವರಗಳನ್ನು ಅನುಬಂಧ-3ರಲ್ಲಿ ಲಗತ್ತಿಸಿದೆ. |
| ಇ | ಸದರಿ ಸೀಟುಗಳ ಶುಲ್ಕದ ಏರಿಕೆಯನ್ನು ಯಾವ ಮಾರ್ಗಸೂಚಿಯನುಸಾರ ಹೆಚ್ಚಿಸಲಾಗುತ್ತಿದೆ; | ಕರ್ನಾಟಕ ವೃತ್ತಿಪರ ಶಿಕ್ಷಣ ಸಂಸ್ಥೆಗಳು (ಪ್ರವೇಶಾತಿ ನಿಯಂತ್ರಣ ಮತ್ತು ಶುಲ್ಕ ನಿಗಧಿ) ಕಾಯ್ದೆ, 2006ರ ನಿಯಮ 4Aರನ್ವಯ ಸರ್ಕಾರವು ಖಾಸಗೀ ವೈದ್ಯಕೀಯ ಸಂಘಗಳೊಂದಿಗೆ ಶುಲ್ಕ ನಿಗಧಿ ಪಡಿಸಲು ಅವಕಾಶವಿರುತ್ತದೆ. ಇದರನ್ವಯ ಒಡಂಬಡಿಕೆ ಒಪ್ಪಂದದಂತೆ ಶುಲ್ಕವನ್ನು ನಿಗಧಿ ಪಡಿಸಲಾಗುತ್ತಿದೆ. |
| ಈ | ಸೀಟುಗಳ ಶುಲ್ಕ ಹೆಚ್ಚಳದಿಂದ ಸರ್ಕಾರಿ ಕೋಟಾದ ಬಡ ವಿದ್ಯಾರ್ಥಿಗಳ ವ್ಯಾಸಂಗಕ್ಕೆ ತೊಂದರೆಯಾಗುತ್ತಿರುವುದು ನಿಜವೇ; | ಸರ್ಕಾರಿ ಕಾಲೇಜುಗಳಲ್ಲಿನ ದಂತ ಹಾಗೂ ವೈದ್ಯಕೀಯ ಸೀಟುಗಳ ಶುಲ್ಕವನ್ನು ಕಳೆದ 3 ವರ್ಷಗಳಿಂದ ಹೆಚ್ಚಿಸಿರುವುದಿಲ್ಲ. ಬಡ ಮತ್ತು ಪ್ರತಿಭಾವಂತ ವಿದ್ಯಾರ್ಥಿಗಳು ಶುಲ್ಕ ಹೆಚ್ಚಳದಿಂದಾಗಿ ದಂತ ಹಾಗೂ ವೈದ್ಯಕೀಯ ಸೀಟುಗಳನ್ನು ನಿರಾಕರಿಸಿರುವ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಉ | ಹಾಗಿದ್ದಲ್ಲಿ, ಅಂತಹ ವಿದ್ಯಾರ್ಥಿಗಳಿಗೆ ನೆರವು ನೀಡಲು ಸರ್ಕಾರ ಕೈಗೊಂಡ ಕ್ರಮಗಳೇನು (ವಿವರ ನೀಡುವುದು)? | ಅನ್ವಯಿಸುವುದಿಲ್ಲ. |

ಸಂಖ್ಯೆ:ಎಂಇಡಿ 472 ಎಂಪಿಎಸ್ 2020

(ಡಾ:ಕೆ. ಸುಧಾಕರ್)
ವೈದ್ಯಕೀಯ ಶಿಕ್ಷಣ ಮತ್ತು ಆರೋಗ್ಯ
ಮತ್ತು ಕುಟುಂಬ ಕಲ್ಯಾಣ ಸಚಿವರು

ಅನುಬಂಧ-1

2020-21 Medical College List

| Sl.NO | Sl.NO | Year of Inception of College | Intake |
|---|---|---|---|
| | | **Non Minority Medical** | |
| 1 | 1 | Basaveswara Medical College and Hospital, Chitradurga | 100 |
| 2 | 2 | BGS Global Institute of Medical Sciences, Bangalore | 150 |
| 3 | 3 | Dr BR Ambedkar Medical College, Bangalore | 100 |
| 4 | 4 | East Point College of Medical Sciences & Research Centre, Bangalore | 150 |
| 5 | 5 | JJM Medical College, Davangere | 245 |
| 6 | 6 | K V G Medical College, Sullia | 100 |
| 7 | 7 | Kempegowda Institute of Medical Sciences, Bangalore | 150 |
| 8 | 8 | M S Ramaiah Medical College, Bangalore | 150 |
| 9 | 9 | Mahadevappa Rampure Medical College, Kalaburagi, Gulbarga | 150 |
| 10 | 10 | S S Institute of Medical Sciences& Research Centre, Davangere | 150 |
| 11 | 11 | S. Nijalingappa Medical College & HSK Hospital & Research Centre, Bagalkot | 250 |
| 12 | 12 | Sapthagiri Institute of Medical Sciences & Research Centre, Bangalore | 150 |
| 13 | 13 | Shridevi Institute of Medical Sciences & Research Hospital, Tumkur | 150 |
| | | Non Minority Total | 1995 |
| | | **Minority Medical Colleges** | |
| 14 | 1 | A J Institute of Medical Sciences & Research Centre, Mangalore | 150 |
| 15 | 2 | Akash Institute of Medical Sciences & Research Centre, Devanhalli, Bangalore, Ka | 150 |
| 16 | 3 | Al-Ameen Medical College,Bijapur | 150 |
| 17 | 4 | Father Mullers Medical College, Mangalore | 150 |
| 18 | 5 | Kanachur Institute of Medical Sciences, Mangalore | 150 |
| 19 | 6 | MVJ Medical College and Research Hospital, Bangalore | 150 |
| 20 | 7 | Navodaya Medical College, Raichur | 150 |
| 21 | 8 | Rajarajeswari Medical College & Hospital, Bangalore | 250 |
| 22 | 9 | Sambharam Institute of Medical Sciences & Research, Kolar | 0 |
| 23 | 10 | Srinivas Institute of Medical Research Centre, Srinivasnagar | 150 |
| 24 | 11 | St. Johns Medical College, Bangalore | 150 |
| 25 | 12 | Subbaiah Institute of Medical Sciences, Shimoga, Karnataka | 150 |
| 26 | 13 | The Oxford Medical College, Hospital & Research Centre, Bangalore | 150 |
| 27 | 14 | Vydehi Institute Of Medical Sciences & Research Centre, Bangalore | 250 |
| | | Minority Total | 2150 |
| | | **Private University** | |
| 28 | 1 | Adichunchanagiri Institute of Medical Sciences Bellur | 150 |
| 29 | 2 | Khaja Bandanawaz University - Faculty of Medical Sciences, Gulbarga | 100 |
| 30 | 3 | SDM College of Medical Sciences & Hospital, Sattur, Dharwad | 100 |
| 31 | 1 | Dr. Chandramma Dayananda Sagar Instt. of Medical Education & Research, Harob | 150 |
| | | Private University Total | 500 |
| | | **Deemed Universities** | |
| 32 | 1 | Jawaharlal Nehru Medical College, Belgaum | 200 |
| 33 | 2 | JSS Medical College, Mysore | 200 |
| 34 | 3 | K S Hegde Medical Academy, Mangalore | 150 |
| 35 | 4 | Kasturba Medical College, Mangalore | 250 |
| 36 | 5 | Kasturba Medical College, Manipal | 250 |
| 37 | 6 | Shri B M Patil Medical College, Hospital & Research Centre, Vijayapura(Bijapur | 150 |
| 38 | 7 | Sri Devaraj URS Medical College, Kolar | 150 |
| 39 | 8 | Sri siddhartha Institute of Medical Sciences & Research Centre, Bangalore | 150 |
| 40 | 9 | Sri Siddhartha Medical College, Tumkur | 150 |
| 41 | 10 | Yenepoya Medical College, Mangalore | 150 |
| 42 | 11 | Yenepoya Medical College, Mangalore | 1800 |
| | | Grand Total | 6445 |

15 16

# ಅನುಬಂಧ-2

## ಸ್ನಾತಕೋತ್ತರ ಪದವಿಯ ಬೋಧನ ಶುಲ್ಕದ ವಿವರಗಳು

| 2018-2019 | | | |
|---|---|---|---|
| ಸ್ನಾತಕೋತ್ತರ ಪದವಿ | ಸರ್ಕಾರಿ ಕಾಲೇಜು | ಖಾಸಗಿ ಕಾಲೇಜು | |
| | | ಸರ್ಕಾರಿ | ಖಾಸಗಿ |
| ಪ್ರಿ ಕ್ಲಿನಿಕಲ್ | 5,000 | 63,250 | 95,450 |
| ಪ್ಯಾರಾ ಕ್ಲಿನಿಕಲ್ | 10,000 | 1,26,500 | 1,89,750 |
| ಕ್ಲಿನಿಕಲ್ | 20,000 | 5,06,000 | 7,59,000 |
| ದಂತ ಕ್ಲಿನಿಕಲ್ | 20,000 | 2,58,750 | 4,04,800 |
| ದಂತ ಪ್ಯಾರಾ ಕ್ಲಿನಿಕಲ್ | 5,000 | - | - |

| 2019-2020 | | | |
|---|---|---|---|
| ಸ್ನಾತಕೋತ್ತರ ಪದವಿ | ಸರ್ಕಾರಿ ಕಾಲೇಜು | ಖಾಸಗಿ ಕಾಲೇಜು | |
| | | ಸರ್ಕಾರಿ | ಖಾಸಗಿ |
| ಪ್ರಿ ಕ್ಲಿನಿಕಲ್ | 25,000 | 72,738 | 1,09,768 |
| ಪ್ಯಾರಾ ಕ್ಲಿನಿಕಲ್ | 50,000 | 1,45,475 | 2,18,215 |
| ಕ್ಲಿನಿಕಲ್ | 1,00,000 | 5,81,900 | 8,72,850 |
| ದಂತ ಕ್ಲಿನಿಕಲ್ | 50,000 | 2,97,563 | 4,65,520 |

| 2020-2021 | | | |
|---|---|---|---|
| ಸ್ನಾತಕೋತ್ತರ ಪದವಿ | ಸರ್ಕಾರಿ ಕಾಲೇಜು | ಖಾಸಗಿ ಕಾಲೇಜು | |
| | | ಸರ್ಕಾರಿ | ಖಾಸಗಿ |
| ಪ್ರಿ ಕ್ಲಿನಿಕಲ್ | 25,000 | 87,286 | 1,42,698 |
| ಪ್ಯಾರಾ ಕ್ಲಿನಿಕಲ್ | 50,000 | 1,74,570 | 2,83,677 |
| ಕ್ಲಿನಿಕಲ್ | 1,00,000 | 6,98,280 | 11,34,705 |
| ದಂತ ಕ್ಲಿನಿಕಲ್ | 50,000 | 3,57,076 | 6,05,176 |

(15) (16)

## ಅನುಬಂಧ-3

| 2018-19 ರಿಂದ 2020-21ರವರೆಗೆ ಸ್ನಾತಕ ವೈದ್ಯಕೀಯ ಬೋಧನಾ ಶುಲ್ಕದ ವಿವರ | | | |
|---|---|---|---|
| | | ಸರ್ಕಾರಿ ಸೀಟು | ಖಾಸಗಿ ಸೀಟು |
| 2018-19 | ಸರ್ಕಾರಿ ಕಾಲೇಜು | 50,000 | - |
| | ಖಾಸಗಿ ಕಾಲೇಜು | 97,350 | 6,83,100 |
| 2019-20 | ಸರ್ಕಾರಿ ಕಾಲೇಜು | 50,000 | - |
| | ಖಾಸಗಿ ಕಾಲೇಜು | 1,11,953 | 7,85,565 |
| 2020-21 | ಸರ್ಕಾರಿ ಕಾಲೇಜು | 50,000 | - |
| | ಖಾಸಗಿ ಕಾಲೇಜು | 1,28,746 | 9,81,956 |

| 2018-19 ರಿಂದ 2020-21ರವರೆಗೆ ಸ್ನಾತಕ ದಂತ ವೈದ್ಯಕೀಯ ಬೋಧನಾ ಶುಲ್ಕದ ವಿವರ | | | |
|---|---|---|---|
| | | ಸರ್ಕಾರಿ ಸೀಟು | ಖಾಸಗಿ ಸೀಟು |
| 2018-19 | ಸರ್ಕಾರಿ ಕಾಲೇಜು | 40,000 | - |
| | ಖಾಸಗಿ ಕಾಲೇಜು | 63,030 | 4,63,320 |
| 2019-20 | ಸರ್ಕಾರಿ ಕಾಲೇಜು | 40,000 | - |
| | ಖಾಸಗಿ ಕಾಲೇಜು | 72,485 | 5,32,818 |
| 2020-21 | ಸರ್ಕಾರಿ ಕಾಲೇಜು | 40,000 | - |
| | ಖಾಸಗಿ ಕಾಲೇಜು | 83,358 | 6,66,023 |